# ಅಂತರಾತ್ಮನಿಗೆ

ರಂ. ರಾ. ದಿವಾಕರ

ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ

# ಅಂತರಾತ್ಮನಿಗೆ-

## ( TO THE INNER SELF )

- अंतरात्मासे -

ಬರೆದವ:

**ರಂಗನಾಥ ರಾಮಚಂದ್ರ ದಿವಾಕರ**

ಹುಬ್ಬಳ್ಳಿ



ಮುದ್ರಕರು:
ಹಣಮಂತರಾವ ರಾ. ಮೊಹರೆ
ಸಂಯುಕ್ತ ಕರ್ನಾಟಕ ಮುದ್ರಣಾಲಯ, ಹುಬ್ಬಳ್ಳಿ



ಐದನೆಯ ಆವೃತ್ತಿ, ೧೯೫೮

ಬೆಲೆ: ಎಪ್ಪತ್ತೈದು ನ. ಪೈ.

ಪ್ರಕಾಶಕರು
ರಂಗನಾಥ ರಾಮಚಂದ್ರ ದಿವಾಕರ
ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ

## Publisher's Note

During my wanderings in India, several authors and publishers present me with books in their own language. I know some five or six Indian languages but not all. So, I do not understand even the subject matter of such books as have been printed in languages not known to me.

Today every book and booklet published in India goes to the shelves of the National Library of India. When I visit the same, I cannot know even the subject matter of books in languages not known to me.

I thought that a few words of introduction in English now and in Hindi later, in each book in each language may be helpful to all and even to foreigners.

These are musings addressed to Inner Self by me. They are highly introspective and represent free thought rather than any particular school. They were written by me while in jail. The

subject matter ranges over the whole gamut of ideas and feelings of an earnest spiritual aspirant.

'Is it not a kind of selfishness for me to keep these musings to myself — musings which have given me ecstatic joy ?' It is this thought sometimes that explains the publication of this small book.

Several readers who have been spiritually benefited, have written to me expressing their gratefulness. That is the justification for the publication of my innermost thoughts.

Hubli }
8-1-1958. }

R. R. Diwakar

## ಐದನೆಯ ಆವೃತ್ತಿಯ ಮುನ್ನುಡಿ

ಇದು ಈಗ ಈ ಚಿಕ್ಕ ಪುಸ್ತಕದ ಐದನೆಯ ಆವೃತ್ತಿಯು. ಈಗಲೂ ಈ ಪುಸ್ತಕದ ಹಲವಾರು ವಾಚಕರಿಂದ ನನಗೆ ಉತ್ತೇಜಕ ಪತ್ರಗಳು ಬರುತ್ತಲೆ ಇವೆ. ತಮ್ಮ ಅಂತರಿಕ ಜೀವನಕ್ಕೆ ಇದರ ವಾಚನದಿಂದ ಬಹಳ ಸಹಾಯವಾಗುತಿದೆ ಎಂದು ಬರೆಯುವವರೇ ಹೆಚ್ಚು. ಇದು ಪ್ರಕಟನೆಗೆ ಬರೆದ ಪುಸ್ತಕವಲ್ಲ. ಆದರೂ ಪ್ರಕಟವಾದ ಬಳಿಕ, ಇದು ಅಧ್ಯಾತ್ಮಿಕ ಜೀವನಕ್ಕೆ ಇಷ್ಟೊಂದು ಸಹಾಯ ಮಾಡುತಿದೆ ಎಂಬುದು ಬಹಳ ಸಂತೋಷದ ಸಂಗತಿ.

ಅಚ್ಚಿನ ವೆಚ್ಚ ಹೆಚ್ಚಾದರೂ ಬೆಲೆಯನ್ನು ಆದಷ್ಟು ಕಡಿಮೆ ಮಾಡಿ ಇದನ್ನು ಪ್ರಕಟಿಸುತಲಿದ್ದೇನೆ. ವಾಚಕರು ಮನ್ನಿಸಬೇಕು.

ಹುಬ್ಬಳ್ಳಿ
೮-೧-೧೯೫೮

ರಂಗನಾಥ

## ನಾಲ್ಕನೆಯ ಆವೃತ್ತಿಯ ಮುನ್ನುಡಿ

ಈ ಪುಸ್ತಿಕೆಯ ನಾಲ್ಕನೆ ಆವೃತ್ತಿ ಇದು. ಇದರ ಲೋಕಪ್ರಿಯತೆಯು ಸ್ಪಷ್ಟವಿರುವದು. ಮೂರನೆಯ ಆವೃತ್ತಿಯಲ್ಲಿ ಯಾವ ವಿಶೇಷ ಹೆಚ್ಚು ಕಡಿಮೆಗಳೂ ಮಾಡಲಾಗಿಲ್ಲ. ಅಚ್ಚು ಹೆಚ್ಚು ಅಂದ ಮಾಡಲು ಪ್ರಯತ್ನಿಸಲಾಗಿದೆ. ಇದು ಕನ್ನಡ ಸಹೋದರ ಸಹೋದರಿಯರಿಗೆ ಅರ್ಪಿತ.

ಹುಬ್ಬಳ್ಳಿ
೬-೬-೧೯೫೦

ರಂಗನಾಥ

# ಎರಡನೆ ಆವೃತ್ತಿಯ ಮುನ್ನುಡಿ

ಕಾಲಕಾಲಕ್ಕೆ ನನ್ನ ವೃತ್ತಿಯು ಅಂತರ್ಮುಖವಾದಾಗ ಒಳಗೆ ಮೂಡಿದ ಭಾವಗಳಿಗೆ ವ್ಯಕ್ತಸ್ವರೂಪವನ್ನು ಕೊಡಲೆತ್ನಿಸಲು ಅವು ಈ ರೂಪವನ್ನು ತಾಳಿವೆ. ಇವು ಎನ್ನಂತರಂಗದ ಒಳನುಡಿಗಳು, ಇಲ್ಲವೆ ತೊದಲ್ನುಡಿಗಳು ಎನ್ನಬಹುದು. ಅದೇಕೆ, ಇವು ತೊದಲ್ನುಡಿಗಳೇ—ಯಾಕಂದರೆ ಒಳಗಿನ ಆ ಸೂಕ್ಷ್ಮ ವಿವಿಧ ಭಾವನಾಟ್ಯವನ್ನು ಶಬ್ದ-ಗಳಿಂದ ಸ್ಪಷ್ಟವಾಗಿ ಚಿತ್ರಿಸುವದು ಅಸಾಧ್ಯ. ಇವುಗಳನ್ನು ಬರೆಯು-ವಾಗ ನನಗೆ ಒಂದು ಬಗೆಯ ಸಮಾಧಾನವೂ ಆನಂದವೂ ಆಯಿತು. ಅದೇ ಬಗೆಯ ಸಮಾಧಾನವೂ ಆನಂದವೂ ನನ್ನಂತಹ ಸ್ವಭಾವವುಳ್ಳ ಜನರಿಗೆ ಆಗಬಹುದು ಎಂಬ ಆಶೆಯಿಂದ ಇವುಗಳನ್ನು ಪ್ರಕಟಿಸು-ತ್ತಿರುವೆನು. ಆ ಒಳ ಆನಂದವನ್ನಾದರೂ ನಾನೊಬ್ಬನೆ ಸವಿಯು-ವದು ಸ್ವಾರ್ಥವಲ್ಲವೆ ?

ಈ ನಮ್ಮ ಪೃಥ್ವಿಗೂ ಸೂರ್ಯನಿಗೂ ಈಗಿದ್ದ ಸಂಬಂಧವು ಯಾವಾಗ ಪ್ರಾರಂಭಿಸಿತು, ಈ ನಮ್ಮ ಗೋಲವು ಈ ಖಗೋಲದಲ್ಲಿ ಸೂರ್ಯಮಂಡಲದ ಒಂದು ಗ್ರಹವಾಗಿ ಯಾವಾಗ ತಿರುಗಲಾರಂಭಿ-ಸಿತು, ಎಂಬುದನ್ನು ಐನಸ್ಟೀನನಂಥ ಗಣಿತಜ್ಞರು ಹುಡುಕಿ ತೆಗೆಯ-ಬಹುದು. ಜಡಸೃಷ್ಟಿಯ ಕಣಕಣಗಳಲ್ಲಿ, ಅಣುರೇಣುಗಳಲ್ಲಿ ಇರುವ ಆಕರ್ಷಣಶಕ್ತಿಯು ಯಾವ ದಿನ ತನ್ನ ಕಾರ್ಯವನ್ನು ಮೊದಲು ಮಾಡಿತು, ಇದನ್ನಾದರೂ ಲೆಕ್ಕದಿಂದ ಗೊತ್ತು ಹಿಡಿಯಬಹುದು. ಆದರೆ ಚೇತನಸಾಮ್ರಾಜ್ಯದಲ್ಲಿ ಜೀವ-ದೇವರಿಗಿದ್ದ ಸಂಬಂಧವು ಎಂದು, ಹೇಗೆ, ಏಕೆ ಹುಟ್ಟಿತು ಇದನ್ನು ಗೊತ್ತು ಹಿಡಿಯುವ ಗಣ-ತಿಯು ಇನ್ನೂ ಹುಟ್ಟಿಲ್ಲ ! ಈ ಸಂಬಂಧದಲ್ಲಿಯೆ, ಅದನ್ನು ಅರಿತು-

ಕೊಂಡು ಅದರಂತೆ ವರ್ತಿಸುವದರಲ್ಲಿಯೆ ಜೀವನಸೃಷ್ಟಿಯ ಗುಟ್ಟು ಗುರಿಗಳು ಅಡಕವಾಗಿರುವವು. ನಮ್ಮ ಜೀವನವೆಲ್ಲ ಈ ಗುಟ್ಟನ್ನು ಬಿಚ್ಚಲು ಕೈಕೊಂಡ ಮಹಾಯಾತ್ರೆ ಇರುವದು. ಈ ಗುಟ್ಟಿನ ಮೂಲಕವೆ ಈ ನಮ್ಮ ಜೀವನಕ್ಕೆ ನಿತ್ಯ ನವೀನತ್ವವು, ಇದರಿಂದಲೆ ನಮ್ಮಲ್ಲಿ ನವೋತ್ಸಾಹವು, ತನ್ಮೂಲಕವೆ ನಮ್ಮಲ್ಲಿ ಎಂದೆಂದೂ ತಣಿ-ಯುದ ಕುತೂಹಲವು ಉಂಟಾಗುವದು. ಆ ಗುಟ್ಟು ಒಡೆದು ಸ್ಪಷ್ಟ ವಾದ ಕ್ಷಣವೆ ಆತ್ಮಾನಂದದ ಉದ್ಗಮವಾಗುವದು, ತ್ರಿಕಾಲಗಳಳಿದು ಒಂದೇ ಒಂದು ಅಖಂಡ ವರ್ತಮಾನವು ಗೋಚರವಾಗುವದು, ವಿಶ್ವನಾಟಕದ ಅಂತರಂಗವೆಲ್ಲ ತಿಳಿದು ಅತ್ಯಂತ ಸಮಾಧಾನವಾಗು ವದು, ಕೃತಾರ್ಥತೆಯ ಛಾಯೆದೋರಿ ಧನ್ಯಭಾವದ ಅನುಭವವಾಗು ವದು. ಈ ಅನುಭವವೆಂದರೆ ಜೀವನಯಾತ್ರೆಯ ಒಂದು ದೊಡ್ಡ ಮೆಟ್ಟು. ಆದರೆ ಅದು ಕೊನೆಯಲ್ಲ. ಈ ಅನುಭವವೆಂದರೊಂದು ಹೊಸ ಹಾಗೂ ದಿವ್ಯ ಜೀವನದ ಪ್ರಾರಂಭ! ಅದು ಮುಂದೆ ನಿತ್ಯ ನೆಲೆಗೊಂಡಿತೆಂದರೆ ಅದೇ ಜೀವನದ ಪರಿಪೂರ್ತಿ ಎನ್ನಬಹುದು. ಅದೇ ಸಹಜ ಸಮಾಧಿಯು. ಆ ಆತ್ಮಲೀಲಾವಿಲಾಸವೆ ಕೊನೆಯ ಮೆಟ್ಟು.

ಇದು ಗುಟ್ಟು ತಿಳಿದಮೇಲಿನ ಮಾತಾಯಿತು. ಆದರೆ ಒಂದು ಬಗೆಯಿಂದ ನೋಡಿದರೆ ನಾಟಕದ ಮನೋರಮತೆಯು ಕೇವಲ ಅದರ ಗುಟ್ಟು ತಿಳಿಯುವದರಲ್ಲಿ ಅಷ್ಟೇ ಅಡಕವಾಗಿಲ್ಲ. ಅದನ್ನು ತಿಳಿದುಕೊಳ್ಳುವದಕ್ಕಾಗಿ ನೋಡುವವನು ಮಾಡುವ ಪ್ರಯತ್ನ ದಲ್ಲಿಯೂ ಒಂದು ಬಗೆಯ ವಿಶೇಷ ಆನಂದವಿದೆ. ' ನನಗೆ ಮುಕ್ತಿ ಬೇಡ, ಅಖಂಡ ಭಕ್ತಿಜೀವನವನ್ನೇ ದಯಪಾಲಿಸು ' ಎಂದು ಮಹಾ ಭಕ್ತಶ್ರೇಷ್ಠರು ಪರಮಾತ್ಮನನ್ನು ಬೇಡಿಕೊಳ್ಳುವದುಂಟು. ಆದರ

ರಹಸ್ಯವಾದರೂ ಇದೇ ಇರುವದು. ಜೀವ-ದೇವ ಸಂಬಂಧದ ರಹಸ್ಯವನ್ನು ಹುಡುಕುವಾಗ ನಮ್ಮ ಜೀವನವೆಂಬುದೊಂದು ರಸಗೆಡದಂಥ ಅಖಂಡ ರಮ್ಯ ನಾಟಕವಾಗಿ ಪರಿಣಮಿಸಬಲ್ಲದು. ಇಲ್ಲಿ ಹೇಳಿದ ನಾಲ್ಕು ಮಾತುಗಳು ಆ ರಹಸ್ಯವನ್ನು ಹುಡುಕುವಾಗ ಆಡಿದ ಒಡನುಡಿಗಳು.

ಇವುಗಳನ್ನು ನಾನು ಹಿಂಡಲಗಿ (ಬೆಳಗಾಂವಿ) ಸೆರೆಮನೆಯಲ್ಲಿ ಇರುವಾಗ (೧೯-೩-೩೨ ರಿಂದ ೭-೭-೩೪ರ ವರೆಗೆ) ಬರೆದಿರುವೆನು. ಅರ್ಥಾತ್ ಇವು ಆ ಅವಧಿಯಲ್ಲಿ ಬೇರೆ ಬೇರೆ ಕಾಲಕ್ಕೆ ಬರೆಯಲ್ಪಟ್ಟವೆ. ಇವುಗಳಿಗೆ 'ಪೂರ್ಣಾರ್ಪಣ, ಸರ್ವಾರ್ಪಣ,' ಇಲ್ಲವೆ 'ಆತ್ಮಾರ್ಪಣ,' ಎಂಬ ಹೆಸರನ್ನಿಡಬೇಕೆಂದು ಮಾಡಿದ್ದೆನು. ಆದರೆ 'ಅಂತರಾತ್ಮನಿಗೆ' ಎಂಬ ಹೆಸರೇ ಮುಂದೆ ಯೋಗ್ಯವೆನಿಸಿದ್ದರಿಂದ ಅದನ್ನೆ ಆರಿಸಿರುವೆನು. ಈ ೬೦ ನುಡಿಗಳೆಲ್ಲ ಅರ್ಥತಃ ಬಿಡಿಬಿಡಿಯಾಗಿಯೆ ಇವೆ, ಎಂದು ಹೇಳಬಹುದು. ಹಲವು ಮಾತ್ರ ಒಂದಕ್ಕೊಂದು ಕೊಂಡಿಯಂತೆ ಹಿಡಿದುಕೊಂಡಿವೆ.

ಕೊನೆಗೆ ಶಬ್ದಾರ್ಥಗಳನ್ನು ಕೊಟ್ಟಿದ್ದೇನೆ. ಅವು ಹಲವರಿಗಾದರೂ ಉಪಯುಕ್ತವಾಗಬಹುದೆಂದು ನಂಬಿದ್ದೇನೆ.

ಈ ಎರಡನೆಯ ಆವೃತ್ತಿಯನ್ನು ಹೊರಡಿಸುವಾಗ ನನಗೆ ಹಲಕೆಲವು ಮಹತ್ವದ ಸಲಹೆಗಳನ್ನು ಕೊಟ್ಟಿದ್ದಕ್ಕಾಗಿ ನನ್ನ ಪ್ರಿಯಮಿತ್ರರಿಗೆ ಧನ್ಯವಾದಗಳನ್ನರ್ಪಿಸದೆ ಇರಲಾರೆನು.

ಹುಬ್ಬಳ್ಳಿ
ಕಾ. ಶು. ೧ ಶಕೆ ೧೮೫೯

ತಮ್ಮ
ರಂಗನಾಥ

# ಅಂತರಾತ್ಮನಿಗೆ–

೧

ಯುಗಯುಗಾಂತರದಿಂದ ನಿನ್ನನು ಅರಸುತಲಿರುವೆ ಹೇ ಎನ್ನ ಪ್ರೇಮಪೂಜೆಯ ಪುತ್ಥಳಿಯೆ. ನಾನಿನ್ನು ತಡೆಯಲಾರೆ. ನೀನು ಎನ್ನನಗಲಿದಂದಿನಿಂದ ಕಂಡು ಕಾಣದೆ, ಅರಿತು ಅರಿಯದೆ, ತಿಳಿದು ತಿಳಿಯದೆ ನಿನ್ನನಲ್ಲದೆ ಇನ್ನಾವುದನು ಬಯಸಿಲ್ಲ, ಬೇಡಿಲ್ಲ, ಹುಡುಕಿಲ್ಲ ಎನ್ನ ಹೃದಯಸ್ವಾಮೀ. ಅತ್ತಿತ್ತ ಅದನಿದನು ಬೆಂಬಳಿಸಿ ಹರಿಯುವಂತೆ ತೋರುವುದೆನ್ನ ಮನವು. ಅಲ್ಲಿ ನೀನಿರುವೆಯೆಂಬ ಹುಸಿಯಾಸೆ ಅದಕೆ. ಆದೆಲ್ಲ ನಿನಗಾಗಿ ಎನ್ನ ದೊರೆಯೆ; ನಿನ್ನನು ನೋಡಿ, ಕೂಡಿ, ನಿನ್ನೊಡನೆ ನಲಿನಲಿದಾಡಬೇಕೆಂದಲೆ. ನಿನ್ನನು ಪಡೆದಾಕ್ಷಣವೆ ಎನ್ನ ಹಸಿವು ಹಿಂಗುವದು, ಎನ್ನ ಆತುರ ಅಳಿಯುವದು; ಸಾಗರವ ಸೇರಿದ ಸರಿತ್ತಿನಂತೆ ಶಾಂತವಾಗುವುದೆನ್ನ ಹೃದಯ. ಅಂಧಕ ಬೆಳಕ ಹುಡುಕಿದಂತಾಗಿದೆ ಇದುವರೆಗೆ ಎನ್ನ ಶೋಧ. ಇನ್ನಾದರೂ ಕರುಣಿಸಯ್ಯ. ಎನ್ನ ತವಕವ ತಣಿಸಿ, ಕಳವಳವ ಕಳೆದು ಕೃಪೆ ಮಾಡು, ಜೀಯಾ. ಕಳೆದುಹೋದ ತನ್ನ ನಲ್ಲೆಯನು ಕಂಡು ಕೂಡಿದೊಡನೆ ನಲ್ಲನು ಬಿಗಿಬಿಗಿದಪ್ಪುವಂತೆ ಎನ್ನನೊಮ್ಮೆ ಮನದಣಿ ಮುದ್ದಾಡಯ್ಯಾ, ಅಂತರಾತ್ಮಾ.

೧

ಎಂದೋ ಅಗಲಿದ ಒಡೆಯ ಇಂದು ಬಂದು ಎನ್ನನು ಕಾಣುವನೆಂಬ ಸುಖಸ್ವಪ್ನವಾಗಿರುವುದೆನಗೆ. ಹಾದೀ ಕಾದು ಕಾದು ಕಾತರಗೊಂಡಿದ್ದೆನು. ಒಮ್ಮೆ ಕೃಪೆಯಾಯಿತೆನ್ನಬೇಕು. ಆದರಿನ್ನಾವ ಪರಿ ಸ್ವಾಗತಿಸಲಿ ಆ ಎನ್ನ ಹೃದಯಸ್ವಾಮಿಯನು? ಮನದಂಗಳವನುಡುಗಿ, ಶಾಂತಿಸೇಚನೆ ಮಾಡಿ, ಸುವಿಚಾರದ ರಂಗವಲ್ಲಿಯ ಹಾಕಿ, ನಿಲ್ಲುವೆ ಬಾಗಿಲಲಿ ನಾನು. ಬಾ, ಬಾ, ದೊರೆಯೆ, ಈ ನಿರ್ಮಲ ಭಾವಪೀಠದಲಿ ಕುಳಿತು ಎನ್ನಂತರಂಗವನು ಆಳು. ನಿನ್ನ ಕಿರಿಯಾಳಾಗುವುದೆ ಹಿರಿದಾದ ಅರಸುತನವೆನಗೆ, ಅಂತರಾತ್ಮಾ.

೨

ಸ್ವಾಮೀ, ಎನ್ನಂತರಂಗದ ಕತ್ತಲೆ ಹರಿದು ಮಂಗಲ ಸುಪ್ರಭಾತವಾಗುವುದೊ ಈ ಹೊತ್ತು? ಆ ಭಾಗ್ಯವಳವಡುವುದೊ ಎನ್ನ ಈ ಜೀವನದಲ್ಲಿ? ದೇವಾ ಯಾಕೆ, ಉತ್ತರವಿಲ್ಲ? ನೀನು ಹೊರಿಸಿದ ಈ ತನುಮನಧನಗಳ ಹೊರೆ ಹೊತ್ತು, ಅದೆಲ್ಲ ಎನ್ನದೆಂದು ಹೊಡೆದಾಡಿ ಬೇಸತ್ತೆನಲ್ಲಾ! ನಿನ್ನ ಸೊಮ್ಮು ನಿನಗೊಪ್ಪಿಸಿ ಕಡೆಹಾಯುವ ಕ್ಷಣವ ತಾ ಬೇಗ ಪ್ರಭುವೇ. ಸಾಕು, ಸಾಕು, ಇನ್ನು ಪರಿಕಿಸಬೇಡ. ನಂಬಿದವನು ನಷ್ಟ

ವಾಗುವನಕ ತಡೆಯಬೇಡ. ನನ್ನ ನಿನ್ನದೆಂಬುದೆಲ್ಲವ, ಇಕೊ, ಈ ಅಂಜಲಿಯಲಿ ಹಿಡಿದುಕೊಂಡು ನಿಂತಿರುವೆ. ಇದನು ಸ್ವೀಕರಿಸು, ಎನ್ನನೂ ಸ್ವೀಕರಿಸು. ಈಹೊತ್ತು ಇದು ಸರ್ವಾರ್ಪಣ, ಪೂರ್ಣಾರ್ಪಣ. ಹೇ ಅಂತರಾತ್ಮನ್, ಇನ್ನು ನಾನು ಮಾಡುವುದೆಲ್ಲ ನಿನ್ನ ಯಂತ್ರವೆಂದು, ಭೋಗಿಸುವುದೆಲ್ಲ ನಿನ್ನ ಪ್ರಸಾದವೆಂದು, ಸುಖಿಸುವುದೆಲ್ಲ ನಿನ್ನ ಕರುಣೆಯೆಂದು. ತನು ಮನಧನಗಳ ಮಮತೆಯ ಕಳೆದು, ಆತ್ಮಗುಣವನೆ ಪಡೆದು, ಇನ್ನು ನಲಿಯುವೆನಯ್ಯ ನಿನ್ನ ನಿಜ ಕರ್ಮಲೀಲೆಯಲಿ, ನಿನ್ನ ಕೃಪೆ ದೇವಾ, ಅಂತರಾತ್ಮಾ.

೪

ಗಿಡಬಳ್ಳಿಗಿಂತ ಬುದ್ಧಿಗೇಡಿಯಾದೆನಲ್ಲಾ ನಾನು! ಅವುಗಳಿಗಿಂತ ಕಡೆಯಾಗಿ ಕೆಟ್ಟೆನಲ್ಲಾ ಪ್ರಭುವೇ! ಬಳ್ಳಿ ಮೊಳೆತು, ಚಿಗಿತು, ಬೆಳೆದು ಮರವನೇರುವುದು ; ಹೂತು ಮಣ್ಣಿನ ಗಂಧ-ಗುಣವ ಪರಿಪಾಕಗೊಳಿಸಿ ದೆಸೆದೆಸೆಗೆ ಪರಿಮಳವ ಬೀರುವುದು. ಬಳ್ಳಿ ತಾ ಮುಡಿಯುವುದೆ ಆ ಹೂವ? ಆಸರ ಕೊಟ್ಟ ಮರ ತಾ ಕೊಳ್ಳುವುದೆ ಆ ಪರಿಮಳವ? ಇಲ್ಲ, ಇಲ್ಲ. ಗಂಧ ಮುಖದಿಂದ ಔತಣವ ಕೊಟ್ಟು ತುಂಬಿಗಳ ಕರೆಕರೆದು ಭೂಸುಧೆಯನುಣ್ಣಿಸುವ ಆ ಮೂಕ ಬಳ್ಳಿ ಎತ್ತ? ಉಪವಾಸ ವನವಾಸಗಳಿಂದ ತೊಳಲುತ್ತ ಬಳಲುತ್ತ ಮರಗುವ ಮಾನವಬಾಂಧವ

ರನು ಧ್ಯಾನಿಸದೆ, ಮನ್ನಿಸದೆ, ಅಟ್ಟುಂಬ ಉಣ್ಣಗುಳಿ ಸಾನೆತ್ತ ? ಅಂತರಾತ್ಮನಿಗೆ ಸರಿದೋರುವುದೆ ಈ ಸ್ವಾರ್ಥಾಚಾರ ? ಬಸದ ಬಳ್ಳಿಗಳಲಿ ಒಂದನು ಮಾಡಿ ಬದುಕಿಸಯ್ಯಾ, ಎನ್ನನು ಸ್ವಾಮೀ.

## ೫ ಮನಸ್ಸಿನ ಶುದ್ಧಿ

ಮನ ವಿಮಲವಾಗದನಕ ಆತ್ಮಜ್ಯೋತಿ ಬೆಳಗದೆನ್ನುವರು ಜಾಣರು. ಕರುಣಿಸಯ್ಯಾ, ಎನ್ನ ಮನವ ನಿರ್ಮಲಗೊಳಿಸಿ. ಮನದ ಮಲಿನವ ತೊಳೆಯಲಾಗದೆ ಬಳಲುತಿರುವೆನು ಹಗಲಿರುಳು. ನಭದ ನೀಲವ ತೊಡೆಯಬಹುದು, ಕತ್ತಲೆಯ ಕಪ್ಪನಳುಕಿಸಬಹುದು, ಮನದ ಕೊಳೆಯ ಕಳೆಯಲಾಗದು, ದೇವಾ. ಇನ್ನೇನು ಮಾಡಲಿ? ತೊಳೆತೊಳೆದಂತೆ ಕೊಳೆ ಹೊರಡುವುದಲ್ಲದೆ ಬೆಳಗದು ನೋಡಾ, ಈ ಮನ. ಎನ್ನೊಂದು ಹಾಳು ಮನವ ಬೆಳಗದಷ್ಟು ನಿನ್ನ ಕರುಣೆ ನಿರ್ಬಲವಾಯಿತೆ ಪ್ರಭುವೇ ? ಬೆಳಗಿನ ಅರುಣದಲಿ ಮೀಯಿಸಿ, ಶುಭ್ರ ಸೂರ್ಯಕಿರಣಗಳ ತೊಡಿಸಯ್ಯಾ ಒಮ್ಮೆ ಎನ್ನ ಮನಕ್ಕೆ, ಕೋಲ್ಮಿಂಚಿನ ಪ್ರಭೆಯಿಂದ ಬೆಳಗಯ್ಯಾ ಒಮ್ಮೆ ಎನ್ನ ಮನವ. ಗಿರಿನಿರ್ಝರದ ನಿರ್ಮಲ ನೀರಿನಿಂದ ತೊಳೆದು ಒಮ್ಮೆ ಸ್ಫಟಿಕಶಿಲೆಯಂತೆ ಮಾಡಯ್ಯಾ, ಎನ್ನ ಮನವ. ಸತ್ಸಂಗದಿಂದ ಶುದ್ಧೀಕರಿಸಿ ಎನ್ನನು ಬಳಿಗೆ ಕರೆಯಿಸಯ್ಯಾ, ಅಂತರಾತ್ಮಾ.

೬

ದೇವಾ, ನಿನ್ನನರಿಯುವುದು ಹೇಗೆ? ಏತರಿಂದ? ನಿನ್ನ ಕೃಪೆಯಿಲ್ಲದನಕ ಅಸಾಧ್ಯವಯ್ಯಾ. ನೀನು ಕೊಟ್ಟ ಕಾಯ ಜಡ, ಪ್ರಾಣ ಸ್ವಾರ್ಥಪೂರ್ಣ, ಮನ ಚಂಚಲ, ಬುದ್ಧಿ ದ್ವೈತವನಲ್ಲದೆ ಕಾಣದು; ಇನ್ನುಳಿದುದು ಭಾವ. ಎನ್ನ ಭಾವಕ್ಕೆ 'ಅಹಂ' ಭೂತ ಬಡಕೊಂಡಿದೆ! ಭಾವದಂತೆ ದೇವ ಎನ್ನುವರು. ಭಾವದಿಂದಲೇ ದೇವ ಎನ್ನುವುದು ನಿಜ. ಭಾವವಿಲ್ಲದೆ ನೀನಿಲ್ಲ, ನಾನಿಲ್ಲ, ಯಾರೂ ಇಲ್ಲ. ಒಂದೇ ಒಂದು ಅಖಂಡ ಪ್ರಚಂಡ ನಿಯಮನಿಗಡಿತ ನಿಸರ್ಗಯಂತ್ರಚಲಿತ ಅನಂತ ಕ್ರಿಯಾಮಾಲೆಯ ಹೊರತು ಇನ್ನೇನೂ ಕಾಣಲಾರದು ಭಾವರಹಿತ ರಾಜ್ಯದಲಿ. ಆ ಎನ್ನ ಭಾವಕ್ಕೆ ಬಡಕೊಂಡ 'ಅಹಂ' ಪಿಶಾಚಿಯ ಬಿಡಿಸಯ್ಯಾ, ವಿಷಯದಿಂದ ಕಿತ್ತಿ ತೆಗೆದು ನಿನ್ನಲಿ ಇರಿಸಯ್ಯಾ ಎನ್ನ ಮನವನು. ಬರಿಯ ಹೊರಗೆ ನೋಡದೆ ಒಳಗೆ ನೋಡಲು, ಒಳನೋಟದಿಂದ ಹೊರಗೆ ನೋಡಲು ಕಲಿಸಯ್ಯಾ ಎನಗೆ, ಅಂತರಾತ್ಮಾ.

೭

ಅಪ್ಪಾ, ಸ್ವಾಮೀ, ಎನ್ನ ಮೇಲೆ ಇಷ್ಟೇಕೆ ರೋಷ? ಕಂದನ ಹುಟ್ಟಿಸಿ ಈ ಪರಿ ಕಾಡುವರೇ? ನಾನೊಂದು ಅಣುಜೀವ, ಅಭಿಪ್ರಾಣಿ. ನಾನು ಮಾಡಿದ ತಪ್ಪಾದರೂ ಏನು? ಗುಬ್ಬಿಯ

ಮೇಲೆ ಈ ಬ್ರಹ್ಮಾಸ್ತ್ರವೇಕೆ? ಅಯ್ಯೋ, ಏನು ಈ ಅನರ್ಥ ಪರಂಪರೆ? ಉಕ್ಕುಗಡಲಿನ ಪೆರ್ದ್ದೆರೆಗಳ ಪರಿ ಎನ್ನ ಮೇಲೆ ಅಟ್ಟಟ್ಟಿ ಒಂದು ದುಃಖರಾಶಿ ಬಿದ್ದರೆ ತಡೆಯಬಲ್ಲುದೆ ಈ ಜೀವ? ಇದನು ನೋಡಿ ನೀರಾಗುವುದೆನ್ನ ಎದೆ. ಇನ್ನಾದರೂ ಕರುಣಿಸಿ ಕಾಪಾಡು ಎನ್ನ ತಂದೆ. ಅಬ್ಬಬ್ಬ, ಏನಿದು! ಈ ಹೊತ್ತೇನು ರುಜೆಯಡಸಿತು, ನಾಳೆ ಧನವಡಗಿತು, ಮುಂದೆ ಸೆರೆಮನೆವಾಸವಾಯ್ತು, ಬಳಿಕೇನು ಮೋಹದ ಮಡದಿಮಕ್ಕಳ ಮರಣ. ಹೀಗೆ ಎನ್ನದು ಸನ್ನದೆಂಬುದೆಲ್ಲ ನೀಗಿಹೋಗಿ ಬರಿಯ ಪರಟೆಯ ದೊರೆತನವಾಯಿತಲ್ಲಾ ಎನಗೆ! ಅಯ್ಯೋ, ಇದನೆಲ್ಲ ಹೇಗೆ ಸಹಿಸಲಿ, ಅಂತರಾತ್ಮಾ? ಕೊನೆಗೆ ನಿನ್ನೊಲುಮೆಯ-ನಾದರೂ ನೀಡಬಾರದೆ, ದೇವಾ. ಆ ಸಮಾಧಾನವಾದರು ಬೇಡವೆ?

೮

ದುಃಖ ಕಷ್ಟಗಳು ಬೇಡೆಂದೊಡೆ ಎನಗೆ ಛೀ ಹಾಕು ದೊರೆಯೇ. ದುಃಖವೆ ಪಾವನ, ದುಃಖವೆ ಪಾವಕ, ದುಃಖವೆ 'ಅಹಂ' ನಾಶಕ. ದುಃಖವೆ ಎನ್ನ ಮಾಯೆಗೆ ಮದ್ದು. ಅದೇ ನಿನ್ನ ದಾರಿದೋರುವ ದೀಪ. ಇಕ್ಕನ್ನನು ಶೋಧಿಸಲು ದುಃಖದ ಬೆಂಕಿಯಲಿ ಬಂಗಾರದಂತೆ, ಎಸೆ ಎನ್ನನು ಎಡೆಬಿಡದೆ ಸಂಕಟಸಾಯಕಗಳಿಂದ. ಆದರೆ ಒಂದು ಚಿಕ್ಕ ಹರಕೆ ನಿನ್ನ

ಪಾದದಲ್ಲಿ ದೊರೆಯೇ. ನಿನ್ನ ಕರುಣದ ಕವಚವ ತೊಡಿಸು ಎನ್ನ ಹರಣಕ್ಕೆ, ಪ್ರಭುವೇ. ಅಹಾ, ಅದರಿಂದ ಸಾವಿರ ಗಜಬಲ ಎನಗೆ. ಬಳಿಕೇನು, ಬಳಿಕೇನು ? ದುಃಖವಿಷವನುಂಡು ಅಮೃತನಾಗಬಲ್ಲೆ ನಾನು. ಚಿಂತೆಯ ಉರಿಯ ನುಂಗಿ ತಣಿಯಬಲ್ಲೆ, ನಾನು. ಆ ನಿನ್ನ ಕಾರುಣ್ಯದ ವೀರ್ಯವನೀಯೌ ಎನಗೆ ಅಂತರಾತ್ಮಾ. ನೀ ಹೊರಿಸಿದ ಭಾರವ ನೀನಲ್ಲದಿನ್ನಾರಿಳುಹಬಲ್ಲರು, ದೇವಾ ?

೬

ಅಹಾ, ಅದೇನು, ಆ ದಿನ ಎನ್ನನು ಪರಿಶುದ್ಧ ಮಾಡಿದುದು ? ಅದೆಂತಹ ಅಂತರ್ಮಥನವದು ? ಆ ಅಗ್ನಿ, ಸಂತಾಪವೆಂಬ ಅಗ್ನಿ, ಬಳಸಂಕಟಗಳ ಅಗ್ನಿ ; ಅಹಾ ಅದರಿಂದಾದ ಅಂತಃಶುದ್ಧಿ ; ಅಹಾ, ಅದೇ ದಿವ್ಯಾಗ್ನಿಯಲ್ಲವೆ ? ಪಾವಕವೆಂಬ ಹೆಸರು ಅನ್ವರ್ಥಕವಾಯಿತದಕೆ ; ಪಾತಕವನಳಿಸಿ, ಕಾಮುಪುರುಷನ ಸುಟ್ಟು, ಅಹಂನಾದವ ಕೆಡಿಸಿ, ಎನಗೆ ನಿನ್ನ ಕಳೆಯನೇರಿಸಿ ಪಾವನ ಮಾಡಿದ ಅಗ್ನಿಗುರುವನ್ನು ನಾನು ಮರೆಯುವೆನೆ, ಅಂತರಾತ್ಮಾ ? ಆ ಅಗ್ನಿಪರೀಕ್ಷೆಯ ಪರಮೋತ್ಸವವ ಬಣ್ಣಿಸಲಳವೆ ? ಆ ಉರಿನಾಲಗೆ ನನ್ನ ಬಹಿರಂಗವ ನೆಕ್ಕಿ ತೊಳೆಯಿತು. ಅದರ ಝಳದಿಂದ ಎನ್ನ ಮನ ಹಸನಾಯಿತು. ಆ ತೇಜದಿಂದ ಎನ್ನಂತರಂಗ ಬೆಳಗಿತು. ಆ ಪಾವನತೆಯೆ ಅಲ್ಲವೆ ಎನಗೆ

ಪ್ರಸನ್ನತೆಯ ಕೊಟ್ಟುದು ? ಆ ಬೆಂಕಿಯಲ್ಲವೆ ಎನ್ನನಪರಂಜಿಯ ಮಾಡಿದುದು ? ಆ ಸಂಸ್ಕಾರವಲ್ಲವೆ ಎನ್ನನು ನಿನ್ನ ಸೇವಕ-ವೃಂದದಲಿ ಸೇರಿಸಿದುದು ? ಅಯ್ಯಾ, ಅಯ್ಯಾ, ಎನ್ನ ಆ ರೀತಿ ನಿತ್ಯ ಪಾವನ ಮಾಡಯ್ಯಾ ಪಾವಕಪುರುಷಾ, ಆ ಪರಿ ಸುಟ್ಟು ತಣ್ಣಗಾಗುವ, ಸತ್ತು ಬದುಕುವ ಬೀದಿಯ ತೋರಯ್ಯಾ, ಅಂತರಾತ್ಮನೇ.

## ೧೦

ನಲುಮೆಯ ನಿಧಿಯನ್ನು, ಜೀವನಸರ್ವಸ್ವವಾದ ಧನಕನಕಗಳನ್ನು ಕಳಕೊಂಡ ಜಿಪುಣನಂತಾದೆ ನಾನು. ತುಂಬಿದಂತಿದ್ದ ಎನ್ನ ಹೃದಯವು ಈಗ ಬರಿದಾಯ್ತು. ತೆರವಾಗಿ ರಣಗುಟ್ಟುವ ಈ ಎನ್ನ ಹೃದಯಮಂದಿರವನ್ನು ಇನ್ನಾತರಿಂದ ತುಂಬಲಿ ? ಆದರೆ ಎಂತಹ ಮೂಢ ನಾನು ? ಈ ಕ್ಷುದ್ರ ವಸ್ತುಗಳನೇನೆಂದು ಕಾದಿದ್ದೆನೋ ? ಬಂಗಾರವೆಂದು ಬೊಕ್ಕಸದಲ್ಲಿ ಕಸಕಡ್ಡಿ ತುಂಬಿ ಅದನ್ನು ಅವಚಿಕೊಂಡು, ಹಗಲಿರುಳು ಅದನ್ನೆ ಬಗೆಬಗೆದು ಮರುಳಾಗಿದ್ದೆನಲ್ಲಾ ! ದೇವಾ, ದೇವಾ, ಈಗ ಎನ್ನ ಮರುಳು ಮಾಯವಾಯ್ತು, ಅರಿವು ಅಳವಟ್ಟು ಬೆಳಗು ತಲೆದೋರಿತು. ಬಾ, ಎನ್ನ ತಂದೆ. ನೀನೇ ಈ ತೆರಹು ತುಂಬಿ ತೃಪ್ತಿಬಡಿಸು. ನೀನಿಲ್ಲದೆ ಏನೂ ಇಲ್ಲ, ನೀನಿದ್ದರೆ ಎಲ್ಲವೂ ಇದೆ. ಅಲಂಕರಿಸು, ಅಂತರಾತ್ಮಾ, ಈ ಶೂನ್ಯ-ಸಿಂಹಾಸನವ ನೀನೇ ಅಲಂಕರಿಸಿ ಎನ್ನಂತರದ ಐಶ್ವರ್ಯವ ಬೆಳೆಸು.

೧೧

ಎಲ್ಲಿಹುದು, ಯಾತರಲ್ಲಿ ಎನ್ನ ಜೀವನಪೂರ್ತಿ ಪ್ರಭುವೇ ? ಮುಂದೋರದೆ ತಿರ್ರನೆ ತಿರುಗಿಸುವೆಯಲ್ಲಾ ಈ ಚಕ್ರದಲ್ಲಿ; ದಯೆ ಬಾರದೆ ಈ ಎನ್ನ ದೀನದೆಸೆ ನೋಡಿ? ಸಾಕಿನ್ನು, ಬೇಸತ್ತೆ ನೈಸೋತೆ. ಮುಂಗಾಣದೆ ನಿರರ್ಥಕ ಅಡಿಯಿಡಲಾರೆ. ತೋರು, ತೋರು, ಬೇಗ ತೋರು, ಬೆರಳ ತೋರು, ಬೆಳಗ ತೋರು; ಕುರುಡನ ಕೈ ಹಿಡಿದು ಹಾದಿಗೆ ಹಚ್ಚು, ದೇವಾ. ಎನ್ನಂತರಂಗದ ಆರ್ತಾಲಾಪವ ಕೇಳು. ಎಲ್ಲಿಹುದು, ಯಾತರಲ್ಲಿ ಎನ್ನ ಜೀವನಪರಿಪೂರ್ತಿ, ಅಂತರಾತ್ಮಾ ? ಒಮ್ಮೆ ಉಸುರಿ, ಕರಿತೆರೆ ಸರಿಸಿ, ಚಿನ್ಮಯ ಪ್ರಕಾಶವ ಬೀರು. ಹೃದಯ ಸ್ವಾಮೀ, ಎನ್ನನುದ್ಧರಿಸು. ಕಾಡಿಗೀಡಾದವನ ಬೀಡಿಗೆಡೆ ಮಾಡಿ ನವಜೀವನವ ಕೊಡು. ಸ್ವಾಮೀ, ಸ್ವಾಮೀ, ಎಷ್ಟೆಂದು ಕರೆಯಲಿ ? ಏನೆಂದು ಕರೆಯಲಿ ? ಯಾವ ರೀತಿ ಮೊರೆ ಇಡಲಿ ? ನಿನ್ನ ಬಿಟ್ಟು ಇನ್ನಾರನು ಸೇರಲಿ, ಇನ್ನಾರು ಗತಿ ಎನಗೆ, ಅಂತರ್ಯಾಮಿಯೇ ?

೧೨

ಆರಿಗರ್ಪಿಸಲಿದನು, ಆರಿಗೇರಿಸಲಿ ಈ ಜೀವನಪುಷ್ಪವ ? ತೋರಾ, ತೋರಾ, ಅಂತರಾತ್ಮಾ ಎನಗೆ ಎನ್ನ ಇಷ್ಟದೇವತೆಯ. ಈ ಒಡಲ ಒಗೆದು ಉಣಿಸಿ ಉಡಿಸಿ ವರ್ಧಿಸಿದರು

ತಂದೆತಾಯ್ಗಳು. ವಿವಿಧ ಸಂಸ್ಕಾರಗಳಿಂದ ಸುಸಂಸ್ಕೃತ-ವಾಯಿತೀ ಮನ. ವಿವೇಕವಿಕಾಸವಾಗಿ ಬೆಳಗಿತೀ ಬುದ್ಧಿ. ಸ್ಥಿರ ಮಧುರವಾಯಿತೀ ಭಾವ. ಅಯ್ಯಾ, ಅಯ್ಯಾ, ಈ ಬೆಳೆದ ಬಳ್ಳಿಯು ಹಿರಿಯು ಹೂವನೆರಚುವ ತಾವದೋರಿ ಧನ್ಯ ಮಾಡೆ-ನ್ನನು ತಂದೆ. ತೊರೆಬಿಟ್ಟ ಆವಿನಂತೆ, ಹಸಿದ ಕೂಸಿನಂತೆ, ವಿಯೋಗವಿರಹಿಣಿಯಂತೆ, ಸ್ಫೂರ್ತ ಕವಿಯಂತೆ ತವಕಗೊಳ್ಳುತಿ ರುವುದೆನ್ನ ಹೃದಯು. ಎಂದಿನಿಂದ ಈ ಹೂವನು ಹಿಡಿದು ಕೊಂಡು ನಿಂತಿರುವೆ. ಇಷ್ಟದೇವತೆಯು ಕಾಣದೆ ಕೈಸೋತು ಕೆಳಗೆ ಚೆಲ್ಲಿಬಿಡಲೊ ಈ ಹೂವನು ಅಥವಾ ನಿರಾಶೆಯಿಂದ ಬಯಲಲ್ಲಿ ಬೀಸಾಡಿಬಿಡಲೊ ಎಂಬಂತಾಗಿದೆ. ಏನು ಮಾಡಲಿ, ಹೇಳೊಮ್ಮೆ ಪ್ರಭುವೇ. ಇಂದ್ರಿಯಸುಖಕ್ಕೀಡಾಡಲೆ ಈ ಎನ್ನ ಶಕ್ತಿಗಳನು? ಅದು ಸಲ್ಲದೆನಗೆ, ಆತ್ಮಸುಖದ ಸುಳಿವು ಕಂಡ ವನಾಗಿ. ಮಡದಿಮಕ್ಕಳ, ಬಂಧುಬಳಗದ ಸುಖವ ಸಾಧಿಸಲೆ ಈ ಸೊತ್ತಿನಿಂದ? ರುಚಿಸದೆನಗೆ, ಅದು ಸಂಕುಚಿತ ದೃಷ್ಟಿ ಎಂಬುದಾಗಿ. ಮನೆ ಮಡದಿ, ಧನಕನಕ ಬೀಸಾಡಿ ಬೂದಿ ಹೂಸಿ ಏಕಾಕಿಯಾಗಿ ಸಂನ್ಯಾಸಿಯಂತೆ ಎನ್ನೊಬ್ಬನ ಅಂತಃ-ಸುಖವನರಸಲೆ? 'ಛೀ, ಅದು ಸರಿ ತೋಚದೆನಗೆ, ಅದೊಂದು ಮಹಾ ಸ್ವಾರ್ಥವೆನಿಸಿತ್ತಾಗಿ. ಹಾಗಾದರೇನು, ದೇವಾ, ಉಚಿತ ಧ್ಯೇಯವಾವುದಿಲ್ಲವೆ ಎನಗಾಗಿ? ಯೋಗ್ಯ ಇಷ್ಟದೇವತೆ ಯಾವುದಿಲ್ಲವೆ ಎನಗಾಗಿ? ಈ ಎನ್ನ ಜೀವನದ ಜೇನ ಹಿಂಡಿ ಸವಿಯುವ ಬೇಟೆಗಾರ ಹುಟ್ಟಿಲ್ಲನೆ, ಅಯ್ಯಾ? ತೋರು,

ತೋರು, ನೀನೇ ದಾರೀ ತೋರು, ಬೇಗ ತೋರು. ಈ ಹೂ ಬಾಡಿ ಬತ್ತಿಹೋಗುವ ಮುನ್ನ, ಈ ಹರೆ ಇಳಿದು ಮುಪ್ಪು ಕೈದೋರುವ ಮುನ್ನ, ತೋರೆನ್ನ ತಂದೆ, ಕೈಯೆತ್ತಿ ಬೇಡಿ ಕೊಂಬೆ; ಇದನರ್ಪಿಸುವ ಠಾವ ತೋರು ಅಂತರಾತ್ಮಾ.

೧೩

ಮರೆದಪ್ಪಿತೆನ್ನ ಮರುಳ್ತನ ಈಗ! ನಿನ್ನದೆಲ್ಲ ಎನ್ನದೆಂದು ವ್ಯರ್ಥ ಹೊತ್ತು, ಹೆಣಗಿ, ಹೋರಾಡಿ, ದಣಿಯುವ ಈ ಮೂಢನ ನೋಡಿ ನಗುತಿರ್ಪೆಯಲ್ಲಾ, ದೇವಾ. ಎನ್ನದಲ್ಲದನು ಯಾರಿಗರ್ಪಿಸಲಿ, ಯಾವ ದೇವತೆಗೀಯಲಿ, ಎನ್ನ ಧ್ಯೇಯವೇನು, ಎಂದು ನಿನ್ನ ಕೇಳಿ ಹಾಸ್ಯಮಾಡಿಕೊಂಡೆನಲ್ಲಾ ನಾನು! ಯಾತರಿಂದ ಮುಚ್ಚಲಿನ್ನು ಈಗೆನ್ನ ಮುತ್ತಿದ ನಾಚಿಕೆಯ, ನಿನ್ನ ಕರುಣೆಯಿಂದಲ್ಲದೆ? ನಿನ್ನ ಸೊಮ್ಮ ನಿನಗೊಪ್ಪಿಸಿ ಸುಖಿಸಲಾರೆನೆ ನಾನು? ನೀನು ಕೊಟ್ಟ ತನು, ನೀನಿತ್ತ ಮನ, ನೀನಿರಿಸಿದ ಬುದ್ಧಿ, ನಿನ್ನ ಜನದ ಸೇವೆಯಲಿ ಸವೆಯಿಸಿ ಸವಾಧಾನಿಯಾಗಬಾರದೆ ನಾನು? ಜನತಾಜನಾರ್ದನ, ಪ್ರಜಾ ಪರಮೇಶ್ವರ, ನರನಾರಾಯಣ ಇದೇ ಎನ್ನ ದೇವತೆಯಲ್ಲವೆ? ಈ ದೇವತೆಯ ಸೇವೆಯೆ ಎನ್ನ ಜೀವನಸರ್ವಸ್ವವಲ್ಲವೆ, ಸರ್ವ ಪ್ರಭುವೆ? ನೀ ಎನಗೆ ಕೊಟ್ಟುದೆಲ್ಲ ನಚ್ಚಿನ ನಿಧಿ, ವಿಶ್ವಾಸದ ಗಂಟು. ಅದನದಕೆ—ನಿನ್ನ ಕಾರ್ಯಕೆ—ಬಳಸಿ ನಾನು ನಿರ್ಲೇಪ-ನಿರಬಲ್ಲಡೆ ನಾ ಮುಕ್ತ, ನಿನ್ನದೆಲ್ಲ ನನ್ನದೆಂದು ಭಂಡನಂತೆ ಬಡಿ

ದಾಡಿದಡೆ ನಾ ಬದ್ಧ. ಮುಕ್ತಜೀವನದ ಮಾರ್ಗವ ತೋರಿ ನಡೆಯಿಸು, ಕಡೆಹಾಯಿಸು ಎನ್ನನು, ಅಂತರಾತ್ಮಾ.

೧೪

ಹೊನ್ನು, ಹೆಣ್ಣು, ಮಣ್ಣು, ಹೇಯವೆಂಬರು ಚಾಗಿಗಳು, ಹೇಯವೆಂಬುದುಂಟೆ ಅಯ್ಯಾ, ನೀನು ಹುಟ್ಟಿಸಿದುದರಲ್ಲಿ? ತಿಪ್ಪೆಯ ಕೊಳೆಕಸ ಕೂಡ ಹೊಲಕೆ ಹುಲುಸಲ್ಲವೆ? ಹೊನ್ನೆಂಬುದು ಸಕಲಾರ್ಥಸಾಧಕವಲ್ಲವೆ, ಹೆಣ್ಣೆಂಬುದು ಅಖಿಲ ಮಾನವ ಕುಲದ ಮಾತೆಯಲ್ಲವೆ, ಮಣ್ಣೆಂಬುದು ಸಕಲ ಜೀವ-ಕೋಟಿಗಾಧಾರವಲ್ಲವೆ, ಪ್ರಭುವೆ? ಇವುಗಳನುಳಿದು ಬಾಳುವವರು ಕಾಣರೆನಗೆ. ನೋಡುವ ಭಾವದಲ್ಲಿ, ಬಳಸುವ ಪರಿಯಲ್ಲಿ ಹೇಯಶ್ರೇಯವೆಂಬುದಲ್ಲದೆ ಆ ಪದಾರ್ಥದಲ್ಲಿಲ್ಲ ಕಾಣಾ, ಚಾಗೀ. ನಾನು ನನ್ನದೆಂಬುದು ಹೇಯ, ನೀನು ನಿನ್ನದೆಂಬುದು ಶ್ರೇಯವಲ್ಲವೆ, ದೇವಾ? 'ಅಹಂ ಮಮ' ಎಂಬುದು ಹೇಯ, 'ತವ ದಾಸೋಽಹಂ' ಎಂಬುದು ಶ್ರೇಯವಲ್ಲವೆ, ಪ್ರಭುವೇ? ನಾನೆಂದು ಕಂಡದ್ದು ಕೇಳಿದ್ದು, ಮೂಸಿದ್ದು ಮುಟ್ಟಿದ್ದು ವಿಷ; ನೀನೆಂದು ನೋಡಿದ್ದು ಮಾಡಿದ್ದು, ಉಂಡದ್ದು ಉಟ್ಟದ್ದು ಅಮೃತ. ಆಸಕ್ತಿಯಿಂದ ಮಾಡಿದ್ದು ಹೇಯ, ಬಂಧಕ, ಕಹಿ; ಅನಾಸಕ್ತಿಯಿಂದ ಮಾಡಿದ್ದು ಶ್ರೇಯ, ಮೋಚಕ, ಸಿಹಿ—ಅದು ಬಾಡದ ಹೂವಿನ ಪರಿಮಳದಂತೆ.

ಅಳಿಯದ ಅಂಗನೆಯ ಅಧರಾಮೃತದಂತೆ, ಮಾಸದ ಮಧುರಸದ ದಿವ್ಯ ರುಚಿಯಂತೆ. ಹೇಯಭಾವವ ಬಿಟ್ಟು ಶ್ರೇಯಭಾವದಿ ಮಾಡುವ ಬುದ್ಧಿಯನು ಸಲಿಸು, ಅಂತರಾತ್ಮಾ. ಇದೇ ಎಂದೆಂದಿಗೂ ಎನ್ನಂತರಂಗದ ಕೋರಿಕೆ.

೧೫

ಸಂಸಾರ ಹೇಯವೆಂದೋಡುವರು ಸಂನ್ಯಾಸಿಗಳು. ಹೇಯವೆಂಬುದೇತಕೊ ? ಸ್ವಲೀಲೆಗಾಗಿ ಆತ್ಮನು ರಚಿಸಿದ ರಂಗಸ್ಥಲವೀ ಸಂಸಾರ, ಲೀಲೆಗಾಗಿ ಕರಣಂಗಳೊಡನೆ ಆತ್ಮನು ಹೂಡಿದ ಹೋರಾಟವೀ ಸಂಸಾರ. ಇದನು ಬಿಟ್ಟು ಕಿವಿಯ ಮೇಲೆ ಕೈಯನಿಟ್ಟು, ಶಾಂತಂ ಪಾಪಂ ಎಂದು ಓಡಿದಡೆ ಹೇಡಿ-ತನ ಎಮ್ಮ ಪಾಲಿಗೆ ಹೊರತು ಆಟಗಾರಿಕೆ ಇಲ್ಲ, ನೋಡಾ. ಬದಿಗೆ ಸರಿದು ತೆರೆಮರೆಯಾದಡೆ ವೇಷ ಭಿನ್ನವಾಯಿತಲ್ಲದೆ ಆಟ ಹಿಂಗಲಿಲ್ಲ, ಸಂಸಾರ ಬಿಡಲಿಲ್ಲ. ಆ ಕಾರಣ ಆತ್ಮನ ಆಹ್ವಾನ ಮನ್ನಿಸಿ ಅವ ಹೂಡಿದ ಆಟವ ಆಡಿ, ಕರಣಂಗಳ ಗೆದ್ದು ಪರಮ ಪದವಿಯ ಪಡೆಯುವ ಎದೆಗಾರಿಕೆಯ ಕೊಡಯ್ಯ, ಎನ್ನಳಿ-ಮನಕೆ, ಅಂತರಾತ್ಮಾ.

ಆರಿಜುವರಳುಕುವರೀ ಸಂಸಾರಕ್ಕೆ. ಹೇಯವೆಂದು ಹೀಯಾಳಿಸುವರು ಜನನಮರಣಗಳ. ಅದೇಕೆ ಸ್ವಾಮೀ, ಇವರ ಪರಿ ಹೀಗೇಕೆ? ಇವರು ಹೋಗುವ ಠಾವದೆಲ್ಲಿ ಈ ಸಂಸಾರವ ಬಿಟ್ಟು? ಇವರೆಲ್ಲಿರಬೇಕೆನ್ನುವರು ಜನನಮರಣವ ತೊರೆದು? ಇವುಗಳ ಬಿಟ್ಟು ನಿನ್ನನರಸುವರಂತೆ! ಅದು ಹೇಡಿಗಳ ಪಲಾಯನವಲ್ಲವೆ ಸಂಸಾರದಿಂದ? ನೀನಿಲ್ಲವೆ ಇಲ್ಲಿ, ನೀನಿಲ್ಲವೆ ಇವುಗಳಲಿ? ನಿನ್ನನಿಲ್ಲಿ ಕಾಣದವರು ಅಲ್ಲಿ ಕಾಣಬಲ್ಲರೆ 'ಮುಕ್ತಿ' ಎಂಬಲ್ಲಿ? ಅವರರಸುವ 'ಮುಕ್ತಿ' ಆತ್ಮನ ಸಂತತ ಸಮಾಧಿಯಲ್ಲವೆ? ಎಲ್ಲೆಲ್ಲಿಯೂ ಇರುವ ನಿನ್ನ ನಂಬಿ, ನೋಡಿ, ಸಮತೆಯಿಂದ ಸಂಸಾರದಲ್ಲಿರುವುದೆ ನಿಜ ಮುಕ್ತಿಯಲ್ಲವೆ, ಪ್ರಭುವೇ? ಅದನು ಬಿಟ್ಟು ನಿನ್ನನು ಹುಡುಕುವವರು ಕಣ್ಣಿದ್ದ ಕುರುಡರು, ಕಿವಿಯಿದ್ದ ಕಿವುಡರು; ತಾಯ ತೊಡೆಯಲಿದ್ದು ತಾಯನರಸುವರವರು. ಇದು ನದಿಯ ಮೀನ ನೀರನರಸಿದ ಪರಿ, ಆಕಾಶದ ವಿಹಗ ವಾಯುವನರಸಿದ ಪರಿ. ಈ ರೀತಿ ಎಂದೆಂದೂ ಮೋಸಹೋಗಿಸದಿರಾ ಎನ್ನನು, ಅಂತರಾತ್ಮಾ. ನೋಡಿದ್ದು ನಿನ್ನ ರೂಪ, ಕೇಳಿದ್ದು ನಿನ್ನ ಶಬ್ದ, ಮುಟ್ಟಿದ್ದು ನಿನ್ನ ಪಾದ, ಸವಿದದ್ದು ನಿನ್ನ ಪ್ರಸಾದ, ಹೀಗೆ ಮಾಡಿ ಈಗಿದ್ದ ಠಾವನೆ ಮುಕ್ತಿಪದವನಾಗಿಸುವಂತೆ ಕರುಣಿಸಯ್ಯ, ಮಹಾಸ್ವಾಮೀ.

ನಿನ್ನ ಕೂಡಿ ಮರಳಿ ಭವಕ್ಕೆ ಬಾರದಿರುವುದೆ ಮುಕ್ತಿ ಎಂಬರು. ನಿನ್ನ ಕೂಡಿ ಮತ್ತೆ ಭವದ ಭಯವೆ? ನಿನ್ನ ಕೂಡುವುದೇಕೆ ಆ ಮೇಲೆ? ನೀನೀ ಭವದಲ್ಲಿಲ್ಲವೆ? ಇಲ್ಲದಿರೆ, ಇಲ್ಲಿಯವರು ನಿನ್ನ ಕಾಣುವ ಠಾವು ಅದಾವುದು? ಈ ಭವ ಬೇರೆ ನೀ ಬೇರೆಯೆ? ನೀನಲ್ಲದೆ ಭವವಿರಬಲ್ಲುದೆ? ನೀ ಬೇರೆ ನಿನ್ನ ಶಕ್ತಿ ಬೇರೆಯೆ? ನೀ ಬೇರೆ ನಿನ್ನ ಲೀಲೆ ಬೇರೆಯೆ? ಲೀಲೆಯಿಲ್ಲದೆ ನೀನಿರುವೆಯಾ, ಇರಬಲ್ಲೆಯಾ? ಇನ್ನು, ಮುಕ್ತಿ ಮುಕ್ತಿ ಎಂದು ಬಡಿದುಕೊಂಡು ನಾನೊಬ್ಬ ಭವಮುಕ್ತನಾದರಾಯಿತೆ, ಸ್ವಾಮೀ? ನನ್ನ ಬಾಂಧವರು, ನನ್ನ ಹಡೆದವರು, ಪಡೆದವರು, ನನ್ನೊಡನೆ ನಡೆದವರು, ಅವರೆತ್ತ ಹೋಗಬೇಕು? ಅವರನು ಬಿಟ್ಟು ನಿನ್ನತ್ತ ನಾ ತೆರಳಬೇಕೆ? ನನಗೊಬ್ಬನಿಗೆಯೆ ಆಗಬಲ್ಲುದೆ ಮುಕ್ತಿ? ಬೇಡ, ದೇವಾ, ಎನಗೆ ಬೇಡ ಆ ಮುಕ್ತಿ. ಎಲ್ಲರನು ಇಲ್ಲಿ ಬಿಟ್ಟು ಇಲ್ಲಿಲ್ಲದ ನಿನ್ನನು ಕೂಡುವ ಮುಕ್ತಿ ಬೇಡೆನಗೆ. ಒಮ್ಮೆ ಸ್ವಾರ್ಥ ಬಿಟ್ಟು ಮತ್ತೆ ಸಾರ್ಥವನರಸಬಹುದೆ? ಇಲ್ಲ, ಇಲ್ಲ. ನೀನಿಲ್ಲಿಯೆ ಈ ಭವದಲ್ಲಿಯೆ ಇರುವೆ, ನಿನ್ನನಿಲ್ಲಿಯೆ ಕಾಣುವೆ, ಕೂಡುವೆ. ಎಲ್ಲೆಲ್ಲಿಯೂ ಇರುವ ನಿನ್ನನು ಎಲ್ಲರನೊಡಗೂಡಿ ಕೂಡುವೆ, ಕೂಡಿ ನಿನ್ನೊಡನಾಡುವೆ, ಆಡಿ ನೀ ಹೂಡಿದಾಟವ ಸಾರ್ಥಗೊಳಿಸುವೆ. ಇಂಥ ಇಹ-ಮುಕ್ತಿಯ ಮಾರ್ಗವ ತೋರಾ ಎನಗೆ, ಅಂತರಾತ್ಮಾ.

ಆಹಾ, ಈಗ ತಿಳಿಯಿತೆನಗೆ. ನಿನ್ನ ಬಿಟ್ಟು ನನ್ನದೆಂದು ಮಾಡಿದುದಕೆ ಈ ಪರಿ ಭಾರವಾಯಿತೆನಗೆ ಸಂಸಾರ. ಎಷ್ಟು ಅಂದಚಂದವಿದ್ದರೇನು, ಯಾವ ಸೌಭಾಗ್ಯವಿದ್ದರೇನು, ತನ್ನನಲ್ಲ ಕಣ್ಮರೆಯಾದೊಡೆ ಸುಂದರಿಯ ಸೊಗಸುಳಿಯುವುದೆ ? ಉಪ್ಪಿಲ್ಲದ ಊಟ ರುಚಿಯೆ, ರಸವಿಲ್ಲದ ಸೊಲ್ಲು ಸವಿಯೆ ? ಆ ಬಗೆಯಾಯಿತೆನ್ನ ಬಾಳ್ವೆ, ನೀನಿಲ್ಲದೆ. ದೇವಾ, ಇನ್ನು ಎಲ್ಲ ನಿನ್ನದೆಂಬ ಭಾವ ಹುಟ್ಟಿಸಿ ನಿತ್ಯ ನಿನ್ನ ಸಂಗದಲ್ಲಿರುವಂತೆ ಮಾಡಯ್ಯಾ, ಅಂತರಾತ್ಮಾ.

೧೯

ಈ ದೇಹ ಪ್ರಾಣಮನಗಳೆಲ್ಲ ನಿನ್ನ ಮನೆ, ನಿನ್ನ ಮಠ, ನಿನ್ನ ಮಂದಿರಗಳಲ್ಲವೆ ಸ್ವಾಮೀ? 'ನಾನು' ಎಂಬ ಗಂಟುಗಳ್ಳ ಇಲ್ಲಿ ಹೋಗಲೇಕೆ ? ಹೊಕ್ಕು ಹಾವಳಿ ಮಾಡಲೇಕೆ ? ಸೂರೆಗೆ ಹಾಕಬಾರದೆ ಶಾಂತಿ-ಸಮಾಧಾನಗಳಿಗೆ ಮುಳುವಾದ ಈ ಸುಳ್ಳು ಕಳ್ಳನ ಕೈಕಾಲ ಕಟ್ಟಿ ಇನ್ನೊಮ್ಮೆತ್ತ ಬಾರದಂತೆ, ಇನ್ನೊಮ್ಮೆತ್ತ ಇಣಕಿ ನೋಡದಂತೆ ? ಸಹಿಸಕೂಡದು ಇನ್ನು ಈ ಆಗಂತುಕನ ಪುಂಡಾಟಿಕೆಯ, ಅಂತರಾತ್ಮಾ.

## ೨೦

ಎನ್ನನು ಪೀಡಿಸುವ ದಾನವ ನಾನೆ ಇರುವೆನಲ್ಲಾ, ಪ್ರಭುವೇ. ನನ್ನ ಹಗೆ ನಾನೇ ಆದೆನಲ್ಲಾ, ದೇವಾ! ನಾನು ನಾನು ಎಂಬ ಅಹಂಗೀತವೆ ಎನ್ನನು ಕೆಡಿಸಿತು, ಎನ್ನ ಹಾದೀ ಬಿಡಿಸಿತು, ದಿಟಸುಖವ ಮರೆಯಿಸಿ ಸಟೆಯಲ್ಲಿರಿಸಿತು. ಈ ಎನ್ನ ಕಣ್ಣಕತ್ತಲೆ ಎಂದು ಹರಿಯುವುದು, ದೇವಾ? ಆ ದುರುಳ 'ನಾನು' ಎಂಬವನನು ಕೊಲ್ಲುವ ಪುಣ್ಯ ಎಂದು ಲಭಿಸುವುದೆನಗೆ? ಎಂದು ಬೆಳಗಾಗುವದಾ ಸುದಿನ? ನನ್ನ ನಾನೇ ಕೊಂದು ಎನ್ನ ಹೆಣದೆದೆಯ ಮೇಲೆ ನಿನ್ನ ಪ್ರಾಣಪ್ರತಿಷ್ಠೆಯ ಮಾಡಿ ನೋಡಿ ನಲಿಯುವ ಮಂಗಲ ಪ್ರಸಂಗವನೆಂದು ತೋರುವಿ ಎನಗೆ, ಅಂತರಾತ್ಮಾ? ಈ ಮರಣಮಯ ಜೀವನದಿಂದ ಕಿತ್ತಿ ಆ ಜೀವನಮಯ ಮರಣದಲ್ಲಿರಿಸಯ್ಯಾ, ಈ ಆತುರ ಜೀವನನ್ನು, ಸ್ವಾಮೀ. ತೋರಯ್ಯಾ ಆ ಹೊಸ ಜೀವನವನ್ನು, ಕುಡಿಸಯ್ಯಾ ಆ ಅಮೃತವನ್ನು.

## ೨೧

ಅಣುಗುರುಡ ನಾನಯ್ಯಾ, ನಿಜಗಾಣದ ಅಂಧಕ ನಾನಯ್ಯಾ. ಎಂದಿಗೂ 'ನಾನು' ಎಂಬ ಗದ್ದುಗೆಯನೇರಿ ನೋಡುವ ಮೂಢ ನಾನಯ್ಯಾ. ಈ ವಿಶಾಲ ವಿಶ್ವದ ಕರ್ತೃಭರ್ತೃನಾದ

ನಿನ್ನನೆ ನೋಡದ ಮಹಾಮೂರ್ಖ ನಾನಯ್ಯ. ನಾನು ಸನ್ನ ದೆಂದು ಹಗಲಿರುಳು ನೊಂದು ಬೆಂದು ಬೆಂಡಾಗುವೆನಯ್ಯ. ಹೊರಗಣ್ಣನು ಮುತ್ತಿದ ಮಾಯೆ ಕಾಡಿಸಿ ಪೀಡಿಸಿ ಹೊಡೆ ಗೆಡಿಸಿತ್ತು, ದೇವಾ. ಸಾಕು ಸ್ವಾಮೀ ಇನ್ನು ಈ ಮರುಳ್ತನ. ಒಳಗಣ್ಣ ತೆರೆಯಿಸಿ, ಬೆಳಗ ಬೀರಿ, ನಿಜವ ಸಾರಿ, ನಿನ್ನ ತೋರಿ ಕರುಣಿಸಯ್ಯಾ, ಅಂತರಾತ್ಮಾ.

೨೨

ಆಡಿದ ಮಾತು ಮರಳದು, ಒಡೆದ ಮುತ್ತು ಒಂದಾಗದು, ಹರಿದ ನೀರು ಮತ್ತೆ ತಿರುಗದು, ಹೋದ ಕ್ಷಣ ಪುನಃ ಬಾರದು. ಎಲೆ ಎನ್ನ ಜೀವಾ, ವ್ಯರ್ಥ ಕಾಲವನೇಕೆ ಕಳೆಯುವಿ? ಅರಿತುಕೊ ನಿನ್ನಾಳವನು, ನಿನ್ನರ್ಥವನು, ನಿನ್ನಿರವಿನುದ್ದೇಶವನು. ಕಾಯ ಕಂದಿ ಕರಿಗೊಳ್ಳುವ ಮುನ್ನ, ಮನ ಭಾವಗಳ ಬಲವಳಿ ಯುವ ಮುನ್ನ, ಬಾಳು ಹಾಳಾಗುವ ಮುನ್ನ ನಿನ್ನ ನೀನರಿತು, ಅರಿವು ಒರೆದ ವೀರಕರ್ಮ ಮಾಡಿ ಕೃತಾರ್ಥನಾಗು ಮರುಳ ಜೀವಾ. ಈಗ ಈ ಬಾಳು ಒಂದು ಬರಿಯ ಭಾಂಡ. ಇದನೊಲ್ಲ ಎನ್ನ ಅಂತರಾತ್ಮನು. ಸದ್ಭಾವ ಸತ್ಕ್ರಿಯೆಗಳ ರಸ ತುಂಬಿ ಒಡೆಯನಿ- ಗರ್ಪಿಸಿ ಧನ್ಯಗೊಳಿಸು ಈ ಜೀವವನು ಬೇಗ, ಎಲೆ ದೇವಾ.

ನಾ ಬಲ್ಲೆ ನಿನ್ನ ನಿಜ ಗುಣವ ಸ್ವಾಮೀ. ಶ್ರಾಂತರ ಸಖನಲ್ಲದೆ ನೀನು ಸೋಮಾರಿ ನಿರ್ಬಲರನೊಲ್ಲೆಯಯ್ಯಾ. ನೀನೊಡ್ಡಿದ ಎಡರುಗಳೊಡನೆ ನನಗಿದ್ದ ಬಲದಿಂದ ಕಲಿಯಂತೆ ಕಾದಾಡಿ ದಣಿಯದ ಮುನ್ನ ನಾ ಶರಣೆನ್ನೆ, ಮೊರೆ ಹೋಗೆ ನಿನಗೆ, ದೇವಾ. ಕೈಲಾಗದ, ಅಳಿಮನದ, ಹೇಡಿಯ ಶರಣಲ್ಲ ಎನ್ನದು ಪ್ರಭುವೇ. ಎನ್ನ ಶರಣು ಶ್ರಾಂತ ಪರಾಕ್ರಮಿ ವೀರನ ಶರಣು. ನೋಡೊಮ್ಮೆ ಎನ್ನತ್ತ. ಕಾದಿ ಕೈ ಸೋತಿವೆ, ಉಸುರು ಕಟ್ಟಿದೆ, ಕೆನ್ನೀರಿನಿಂದ ಮೈ ಮುಚ್ಚಿದೆ. ಈಗ ಶರಣು ಶರಣೆನ್ನುವೆನು. ಬಾ ಬೇಗ, ಕೈ ನೀಡಿ ಕಾಯು ಎನ್ನನು, ಅಂತರಾತ್ಮಾ; ಈ ಪಾಪಪುರುಷನೊಡನೆ ನಾನು ಹೂಡಿದ ಹೋರಾಟದಲಿ ಸೋಲು ಅವಗೆ, ಗೆಲುವೆನಗೆ ಆಗಲೇಬೇಕು.

೨೪

ಶುಭಸಂಧ್ಯಾಸಮಯ, ಜೀವಸಂಕುಲದ ವಿಶ್ರಾಮ ಸಮಯ ಇದು ಸ್ವಾಮೀ, ಈ ಹೊತ್ತು ಎನ್ನ ಹೃದಯಕವಾಟವನು ತೆರೆದಿಟ್ಟು ಕಾಯುತ್ತಿರುವೆ ನಿನ್ನ ಹಾದಿಯನು. ನಿನ್ನ ಸ್ಮರಣವೆ ಎನಗೆ ವಿಶ್ರಾಂತಿದರ್ಶನ, ನಿನ್ನ ದರ್ಶನವೆ ಎನಗೆ ಸ್ವರ್ಗಸುಖ, ನಿನ್ನ ಸಂಗಸುಖವೆ ಎನಗೆ ಅಮೃತಜೀವನ. ಬಾ

ಎನ್ನ ಒಡೆಯಾ, ಬೆಳಕು ಹೀಗುವ ಮುನ್ನ, ಕತ್ತಲೆ ಕವಿವ ಮುನ್ನ, ದುರ್ವಿಚಾರಗಳ ಕೋಲಾಹಲವೇಳುವ ಮುನ್ನ ಎನ್ನ ಹೃದಯಮಂದಿರವ ಪ್ರವೇಶಿಸು. ನೀ ಬರುವಿ ಎಂಬ ಆಶೆ ಎನ್ನ ಜೀವನಕ್ಕಾಧಾರ. ನೀ ಬಂದುದ ಕಂಡರೆ ಉಲ್ಲಾಸ ವುಕ್ಕುವುದೆನ್ನಲ್ಲಿ. ನೀ ಬಂದರೆ ಹೊಲ್ಲವನೆಲ್ಲವ ಗೆದ್ದು ನಿಲ್ಲುವೆ ನಾನು. ನೀ ಬಾರದಿದ್ದರೆ ಸನ್ನ ಸೆಳಲು ನನಗೆ ಮಾರಿ. ಕಾದಿರುವ ಸೇವಕನ ಕೈ ಬಿಡಬೇಡ ಸ್ವಾಮೀ, ನಿನ್ನ ನಂಬಿದ ಭಕ್ತನ ಕಾಡಬೇಡ ಅಂತರಾತ್ಮಾ. ಬೇಗ ಕರುಣಿಸು ಹಿರಿಯಾ, ಕರುಣಿಸಿ ಕಾಪಾಡು.

## ೨೫

ಏನೀ ಆಲಸ್ಯ? ಅದೇಕೆ ಇಷ್ಟೊಂದು ದಣಿವು? ಅದೆಲ್ಲಿಂದ ಬಂದುದೀ ಬೇಸರ? ಎನಗೆ ಶಕ್ತಿ ಇಲ್ಲವೆ, ಸಾಮರ್ಥ್ಯವಿಲ್ಲವೆ? ನೀನೆನಗೆ ಕೈಕಾಲನಿತ್ತಿಲ್ಲವೆ; ಮಾಡಿಮುಟ್ಟಿ, ದುಡಿದು ದಣಿದು ಜೀವಿಸಬೇಕೆಂದು ಹೇಳಿಲ್ಲವೆ? ಆದರೇನು, ಎನ್ನ ದುಡಿತವೆಲ್ಲ ವ್ಯರ್ಥವೆಂದು ತೋರುವುದೆನಗೆ, ಎನ್ನ ಯತ್ನವೆಲ್ಲ ನಿಷ್ಫಲವೆಂದು ತೋಚುವುದೆನಗೆ. ಅದೇಕೆ ದೇವಾ? ಹೀಗೇಕೆ ದೇವಾ? ಹೇಳಬಾರದೆ ಎನಗೆ? ಹುಟ್ಟಿಸಬಾರದೆ ರಾಗ-ರಸ-ರುಚಿಗಳನ್ನು ಈ ಎನ್ನ ಅವಶ್ಯಕರ್ಮದಲ್ಲಿ? ಇಷ್ಟೊಂದು ಅವಕೃಪೆ ಏಕೆ? ಇನ್ನೆಷ್ಟು ದಿನ ಸಹಿಸಲಿ ಈ ಯಾಂತ್ರಿಕ ಜೀವನವ?

ಕರ್ಮ ಸಂದದ ದಾರಿಯ ತೋರಾ ಎನಗೆ, ಅಂತರಾತ್ಮಾ. ಕರ್ಮ ಭಾರವನಿಳುಹಿ, ಕರ್ತೃತ್ವಭಾವದಾಚೆ ದಾಟಿಸಿ, ಲೀಲೆಯ ಪೂಮಾಲೆಯ ತೊಡಿಸಯ್ಯಾ. ಸ್ವಕರ್ಮವನೆ ಲೀಲೆ ಎಂಬ ಭಾವದಿ ಮಾಡುವ ಮನಸನ್ನು ಕೊಡಯ್ಯ, ಪ್ರಭುವೆ.

## ೨೬

ಏನಿದು, ಎನ್ನ ಮನದ ದುರ್ಬಲತೆ ದೇವಾ? ಸ್ವಲ್ಪ ಜಡ್ಡಾದೊಡನೆ ಸಾಯುವೆನೊ ಬದುಕುವೆನೊ ಎಂಬ ಎದೆ-ಗುದಿ ಎನಗೆ? ಎಂತಹ ಅಳಿಮನವಿದು? ಸಮತೂಕವಿರುವ ಪಂಚಭೂತಗಳರಿಯವೆ ತಮ್ಮ ಕಾರ್ಯವ ಈ ದೇಹದಲ್ಲಿ? ಪಂಚ ಪ್ರಾಣಗಳರಿಯವೆ ತಮ್ಮ ಪ್ರಮಾಣವ? ಮೇಲಾಗಿ ನೀ ನೋಡಲರಿಯೆಯಾ ನಿನ್ನವರ ಕ್ಷೇಮವ? ನಾ ಮಾಡುವ ಚಿಂತೆ ಎಲ್ಲಿಗೆ ಮುಟ್ಟಬಲ್ಲದು? ಭೂತಗಳು ದೆಸೆಗೆಟ್ಟರೆ ನಾನ-ವನ್ನು ಒಟ್ಟಿ ಕಟ್ಟಬಲ್ಲೆನೆ? ಪ್ರಾಣಗಳು ಹರಿದು ಹೊರಟರೆ ನಾನವನ್ನು ತಡೆಯಲಾಪೆನೆ? ಎನ್ನ ಘಾತಕ್ಕೆ ನೀನೊಪ್ಪಿದೊಡೆ ನಾ ಕಾಯಲಪ್ಪೆನೆ ಈ ಕಾಯಜೀವಗಳನು? ಎಂತಹ ತಿಳಿಗೇಡಿ ನಾನು! ವ್ಯರ್ಥ ಚಿಂತೆಯ ಚಿತೆಯಲ್ಲಿ ಸುಡುತಿರುವೆನಲ್ಲಾ ಸಾವಮುನ್ನವೆ! ಕಾಡಹೂವಿನಂತೆ, ಹಾರುವ ಹಕ್ಕಿಯಂತೆ ನಿನ್ನನೆ ನಂಬಿ ನಿಶ್ಚಿಂತನಾಗಿ ನಲಿಯುವ ಹಾಗೆ ಮಾಡಯ್ಯ ಎನ್ನನು, ಅಂತರಾತ್ಮಾ.

ಶ್ರೀ ಧರ್ಮ, ಈ ಧರ್ಮ ನಾ ಧರ್ಮಿ, ನೀ ಧರ್ಮಿ, ಎಂದೆಲ್ಲರೂ ಮೆರೆಯುವರಲ್ಲಾ ಸುತ್ತಲೂ! ನಿನಗೊಪ್ಪಿತವೆ ಈ 'ಧರ್ಮ' ದೇವರ ದೇವಾ? ತುಲಸೀಮಣಿ, ಪಟ್ಟನಾಮ, ರುದ್ರಾಕ್ಷಮಾಲೆ, ವಿಭೂತಿಪಟ್ಟ, ತ್ರಿಕಾಲಮಜ್ಜನ, ಅಡಿಗಡಿಗೆ ಮಡಿ ಮುಂತಾದ್ದರಿಂದ ಹಲವರು ಧರ್ಮಿ, ಧರ್ಮ, ಎಂಬರು. ನೇಮದಿಂದ ಗುಡಿಗುಂಡಾರಗಳನೆ ಹೊಕ್ಕು ನಿನಗೆ ಭೆಟ್ಟಿಯಾಗುವೆವೆನ್ನುವರು. ಪರಿಕಿಸಿರುವೆಯಾ ಈ ನಿನ್ನ ಅಪರಿಮಿತ 'ಭಕ್ತ' ಸಂದೋಹವ ಪ್ರಭುವೆ? ಧರ್ಮವೇನು ವೇಶಿಯ ವೇಷವೆ. ರಂಗದ ನಟನೆಯೆ ಈ ಪರಿ ಎಲ್ಲರೂ ಧರ್ಮಮೂರ್ತಿಗಳಾಗಲು? ಕಾಯ ಶುದ್ಧವಿರಬೇಕಯ್ಯಾ ನಿನ್ನೆಡೆಗೆ ಬರಲು. ಪರಧನ ಪರಸ್ತ್ರೀ ಪರಪೀಡೆ ದೂರವಿಟ್ಟು, ಆರ್ತಸೇವೆ ಮಾಡಿ, ಸತತ ಸ್ವಕರ್ಮನಿರತನಿರುವದಲ್ಲದೆ ವಾಣಿ ಶುದ್ಧವಿರಬೇಕಯ್ಯಾ ನಿನ್ನ ನಾಮ ನುಡಿಯಲು. ಪರನಿಂದೆ ಬಿಟ್ಟು, ಪರಗುಣ ಪರಮಾಣುವ ಪರ್ವತಮಾಡುವುದಲ್ಲದೆ ಮನ ನಿರ್ಮಲವಿರಬೇಕಯ್ಯಾ ನಿನ್ನ ಸ್ಮರಿಸಲು. ಕುಕಲ್ಪನೆ ಕಳೆದು ಸುಕಲ್ಪನೆ ತಳೆಯುವುದಲ್ಲದೆ ಭಾವ ಶುದ್ಧವಿರಬೇಕಯ್ಯಾ ನಿನ್ನ ಭಾವಿಸಿ ನಿನ್ನಲ್ಲಿ ಲೀನವಾಗಲು. ಸತ್‌ಸಾಕ್ಷಿಯಾಗಿ, ಪ್ರೇಮಪೂರ್ಣನಾಗಿ, ಸಕಲ ದಯಾಪರನಾಗಿರಬೇಕು. ಇವಿಲ್ಲದ ಧರ್ಮ ಡಂಭಾಚಾರ, ಡೊಂಬರ ಆಟ ಹೊರತು ಧರ್ಮವಲ್ಲ. ಈ ಅಧರ್ಮವ ಬಿಡಿಸಿ ನಿಜ ಧರ್ಮದಲಿರಿಸಯ್ಯಾ ಎನ್ನಸು ಅಂತರಾತ್ಮಾ.

ನೀ ಹೇಳಿದುದು ಜನಸೇವೆ, ಜನತಾಜನಾರ್ದನ ಸೇವೆ, ಸ್ವಾಮಿ. ಜನಸೇವೆಯೆ ನಿನ್ನ ಸೇವೆ ಎಂದು ಸಾರಿರುವಿ ನೀನು. ಆದರೇನು? ನಾನೇನದನು ಮಾಡಬಲ್ಲೆ ನಿನ್ನ ಕರುಣ ವಿಲ್ಲದೆ ದೇವಾ; ನಾನೆಷ್ಟು ಮಾಡಬಲ್ಲೆ ನೀನು ಕೈಕೊಡದೆ ದೇವಾ; ನಾನೆಂತು ಮಾಡಬಲ್ಲೆ ದೇವಾ? ಅಯ್ಯೊ, ಈ ಜನ ರಲ್ಲಿ ಮುಸುಕಿದ ಅಜ್ಞಾನವ, ಈ ದಾರುಣ ದಾರಿದ್ರ್ಯವ, ಈ ದುರುಳತನವ, ಈ ಮಹಾದೈನ್ಯವ, ನಾನೇನು ಕಳೆಯಲಾ- ಪೆನು, ಪ್ರಭುವೇ? ತಮಂಧ ತೊಡೆಯಲು ಹೊನ್ನೇಹುಳ ಹೊರಟಂತಾಯ್ತು, ಪೃಥ್ವೀಪ್ರದಕ್ಷಿಣೆಗೆ ಇರುವೆ ಕಾಲಿಟ್ಟಂ- ತಾಯ್ತು, ವೇದವನೋದಲು ಮೂಢ ಮೊದಲುಮಾಡಿದಂ- ತಾಯ್ತು, ಎನ್ನ ಈ ಪರಿಯ ಪ್ರಯತ್ನ ಸ್ವಾಮೀ! ನಗೆಗೀಡು ಮಾಡಲು ಹೇಳಿದೆಯಾ ಎನಗೆ ಈ ಕಾರ್ಯವ? ಎನ್ನ ಕ್ಷುದ್ರ ತನವ ಕೈಮಾಡಿ ತೋರಿಸಲು ಬೆಸಸಿದೆಯಾ ಎನಗೆ ಈ ಕೆಲಸವ? ಎನ್ನ ತೂಕವ ನೋಡಿ ಹೇಳಬಾರದೆ ನನಗೆ ನಾ ಮಾಡುವ ಮಾಟವ? ಇನ್ನು ಹಾದೀ ತೋರು, ನೀ ಬೆಸಸಿದ ಕಾರ್ಯವ ನೀನೇ ಮಾಡಿಸಿ ಎನ್ನನು ಧನ್ಯಗೊಳಿಸು ಅಂತರಾತ್ಮಾ.

೧೯

ಎಲೆ ಜೀವಾ, ಗಾಬರಿಗೊಳ್ಳಬೇಡ. ಸಾವು ಸುತ್ತಲು ಕುಣಿದರೇನು, ಪ್ರಾಣ ತಾ ಬದುಕಿ ಬಾಳಲೆತ್ನಿಸದೆ? ತಮಂಧ ಮುಸುಕಿದರೇನು, ತಾರಕೆ ತನ್ನ ತೊಳಗ ತೊರೆಯುವುದೆ? ಕತ್ತಲೆ ಕಳೆಯದಿದ್ದರೇನು, ದೀಪ ತಾ ಮಿಣುಕಲರಿಯದೆ? ಎಷ್ಟು ಅಜ್ಞಾನವಿದ್ದರೇನು, ನಿನ್ನ ಅಂತರ್ಜ್ಯೋತಿಯ ಬೆಳಕಿನಿಂದ ಸಾಗಿ ಜನರಿಗೆ ದಾರಿ ತೋರು, ಜೀವಾ, ಧೈರ್ಯಗೆಡಬೇಡ. ಎಷ್ಟು ಬಡತನವಿದ್ದರೇನು, ನಿನ್ನ ಬದುಕ ಹಂಚಿ ಬಾಂಧವರ ಹಿತ ನೋಡು. ಎಷ್ಟು ದುರುಳತನವಿದ್ದರೇನು, ಸಜ್ಜನತನದ ಸತ್ಯಧ್ವಜವನೂರು. ದೈನ್ಯವೆಷ್ಟಿದ್ದರೇನು, ಎದೆ ಗಟ್ಟಿಮಾಡಿ ಎಲ್ಲರಲ್ಲಿ ಉತ್ಸಾಹವ ತುಂಬು. ದಿನಕೊಂದು ಹೆಜ್ಜೆ ಮುಂದೆ ಸಾಗಿದರೆ ಸಾಲದೆ ನಿನಗೆ? ಅದೇ ನಿನ್ನ ಕರ್ತವ್ಯ, ಜೀವಾ. ಅದನು ಮಾಡಿ ಅಂತರಾತ್ಮನ ಆಶೀರ್ವಾದ ಪಡೆದು, ಧನ್ಯನಾಗು ಎಲೆ ಜೀವಾ. ಏಳು, ಎದೆಗಾರನಾಗಿ ಮುಂದೆ ನಡೆ.

೨೦

ಅಯ್ಯೊ, ಅಯ್ಯೊ, ಇನ್ನೇನು ಮಾಡಲಿ? ಇಳಿಹೊತ್ತಾಯಿತು. ಸಂಜೆ ಸಮೀಪಿಸಿತು. ದಾರಿ ನಡೆಯದೆ ವ್ಯರ್ಥ ಕಾಲವ ಕಳೆದೆನಲ್ಲಾ ಸ್ವಾಮೀ. ಅತ್ತ ಮನೆಯೂ ದೂರ ಇತ್ತ

ಮಂದಿರವೂ ದೂರ. ಸಟ್ಟಡವಿಯಲಿ ಕತ್ತಲೆ ಕವಿವ ಕಾಲ ಒದಗಿತಲ್ಲಾ ! ಹಾದಿಯು ಹೆಣವಾಗುವ ಹೊತ್ತು ಬಂದಿತಲ್ಲಾ ! ಅಯ್ಯೋ, ಇನ್ನೇನು ಗತಿ ? ದೇವಾ, ದೇವಾ, ಎಂತಹ ಹುಡುಗ ಬುದ್ಧಿ ಎನ್ನದು ? ಕಾಡ ಹೂಗಳ ಹರಿಯುತ, ಗಿಡಬಳ್ಳಿಗಳ ನೋಡುತ, ಹಕ್ಕಿಗಳ ಹಾಡ ಕೇಳುತ ದಿನವ ನೂಕಿದೆನಲ್ಲಾ, ನೀ ತೋರಿದ ದಾರಿಯು ಸಡೆಯುದೆ. ಇನ್ನಾರು ಗತಿ ಎನ್ನಂತಹ ವೈಗಳ್ಳನಿಗೆ ಅಂತರಾತ್ಮಾ ನೀನಲ್ಲದೆ ? ಮುಟ್ಟಿಸಬಾರದೆ ಎನ್ನನು ಆ ಸುಂದರ ಮಂದಿರಕೆ, ಎಲ್ಲರೂ ಅರಸುವ ಆ ಅಂದವಾದ ಆತ್ಮ ಮಂದಿರಕೆ ? ಅಲ್ಲಿ ಹೃದಯೇಶ್ವರನ ಮುಂದೆ ಹೊಡೆಗೆಡುವೆ, ಅವನ ಚರಣದ ಮೇಲೆ ಉರುಳಾಡಿ ತಪ್ಪುಗಳನೊಪ್ಪಿಕೊಳ್ಳುವೆ, ಕ್ಷಮೆ ಕೇಳುವೆ. ಮತ್ತಿನ್ನೇನ ಮಾಡಲಾಗುವದು, ಇನ್ನಾವ ದಾರಿ ಇರುವುದೆನಗೆ ಮಹಾಪರಾಧಿಗೆ, ಸ್ವಾಮೀ ? ಒಯ್ಯಿ, ಒಯ್ಯಿ, ಎನ್ನನು ಅಲ್ಲಿ, ಹೊತ್ತು ಮುಳುಗುವ ಮುನ್ನ, ದಾರಿ ಕಾಣದ ಹಾಗಾಗುವ ಮುನ್ನ. ಸಟ್ಟಡವಿಯಲಿ ಕೈ ಬಿಡಬೇಡ ಅಂತರಾತ್ಮಾ.

## ೩೧

ಒಡೆಯಾ, ಎನ್ನ ಮಾನಸಸರೋವರದ ರಾಜಹಂಸನಾಗಿ ನೀನು ಎಂದು ವಿರಾಜಿಸುವೆ, ಹೇಳಾ ಪ್ರಭುವೇ. ಒಮ್ಮೆ ಹೇಳಿ ಎನ್ನ ಆತುರವ ಅಳಿಸು ಸ್ವಾಮೀ. ನೋಡು, ನೋಡು,

ಒಮ್ಮೆಯಾದರೂ ನೋಡು, ಈ ಎನ್ನ ಮನದ ಸ್ಫಟಿಕಶಿಲೆಯಲ್ಲಿ ನಿಂತ ನಿರ್ಮಲ ಭಾವದಲ್ಲಿ ಮೂಡಿ ಒಮ್ಮೆಯಾದರೂ ಎನಗೆ ನಿನ್ನ ಬಿಂಬವ ತೋರು. ಒಂದರೆಕ್ಷಣವಾದರೂ ಇಣಕಿ ಹೋಗು. ಅಕೋ, ಈ ಶಾಂತ ಸರಸ್ಸಿನಲ್ಲಿ ನೀಲ ನಭದ ಛಾಯೆ. ಅದೇ ನಿನ್ನ ಪೀಠ. ಅಕೋ, ಅದರಲ್ಲಿ ಕಮಲಗಳು ನಿನ್ನ ಹಾದಿಯನೆ ಉತ್ಕಂಠಿತವಾಗಿ ನೋಡುತಿವೆ. ಸ್ವಾಮೀ, ಎಷ್ಟೊಂದು ಕಷ್ಟಪಟ್ಟಿರುವೆ ನಾನು ಎನ್ನ ಮಲಿನ ಮನವ ವಿಮಲ ಮಾಡಲು ! ನೀ ಬರಬೇಕೆಂದು, ನಾನು ನಿನ್ನನು ಕಾಣಬೇಕೆಂದು ಇನಿತೊಂದು ಸಾಹಸ, ಇಷ್ಟೊಂದು ಸಿದ್ಧತೆ. ನೀ ಬಾರದಿರೆ,— ಅಯ್ಯೋ ಬೇಡ ಆ ಮಾತೇ ಬೇಡ,— ಆ ಅಮಂಗಲ ಅಶುಭ ಕಲ್ಪನೆಯೆ ಬೇಡ. ನಿನ್ನಾಶೆಯಿಂದ ಎನ್ನ ಬಾಳ್ವೆ. ಆ ತಂತುವನು ಹರಿಯಬೇಡ ದೊರೆಯೇ; ಬಳ್ಳಿಗಾಧಾರವಾದ ಗಿಡವನು ಕಡಿಯಬೇಡ, ಕಗ್ಗತ್ತಲೆಯಲಿ ಕಾಣುತಿರುವ ಒಂದೇ ಕಿರಣವನು ಕಳೆಯಬೇಡ ಸ್ವಾಮೀ. ತಡೆಯುವೆ, ಕಾಯುವೆ, ಹಾದೀ ನೋಡುವೆ. ಜನ್ಮಜನ್ಮಾಂತರಗಳನಾದರೂ ತಾಳಿ ನಿನ್ನ ಸೊಮ್ಮ ಪಡೆವೆನೆಂಬ ಆಶೆ ಎನಗೆ. ಒಮ್ಮೆಯಾದರೂ ಆಶ್ವಾಸಿಸು, ವಚನ ಕೊಡು, ಅಂದರೆ ಸಾಕು. ಅದೇ ಎನಗೆ ಜೀವನಾಮೃತ. ಇಷ್ಟೊಂದು ಕರುಣಿಸು ಅಂತರಾತ್ಮಾ.

೩೧

ಇವರಾರು, ಎನ್ನ ನಿನ್ನ ಸಲ್ಮೆಯ ಆಟಕೂಟಗಳ ನಡುವೆ ಬರುವವರು, ಹೃದಯೇಶ್ವರಾ ? ಹಗಲಿರುಳು ಬೆನ್ನು ಬಿಡದೆ ಎನ್ನನು ಮೋಹಿಸಲೆತ್ನಿಸುವರು, ನಿನ್ನನು ಮರೆಯಿಸಿ, ಬದಿಗೆ ಸರಿಸಿ, ತಾವು ಎನ್ನಂತರಂಗದಲ್ಲಿ ಮನೆಮಾಡಬಯಸುವವರು. ನಾನವರನೊಲ್ಲೆ, ದೇವಾ. ನೀನೇ ಅವರನು ಕಳುಹಿಸಿದ್ದರೂ ನಾನವರನೊಲ್ಲೆ—ನಿನ್ನನು, ನಿನ್ನ ಛಾಯೆಯನು ಕೂಡ ಅವರಲ್ಲಿ ನಾ ಕಾಣೆ. ನಿನ್ನನೆ ಅವರಲ್ಲಿ ಕಾಣುವನಕ ನಾನಾರನೂ ಒಲ್ಲೆ, ನಾನಾವುದನೂ ಒಲ್ಲೆ, ನಿನ್ನೊಬ್ಬನಲ್ಲದೆ, ನಮ್ಮವರು ನಿಮ್ಮವರು ಎಂದು ಬಳಿಸಾರುವರಿವರು. ಅತಿ ನಿಕಟಕ್ಕೆ ಬಂದು ಸಲಿಗೆಯ ಬೆಳೆಸುವರು. ತಂದೆ-ತಾಯಿ, ಮಡದಿ-ಮಕ್ಕಳು, ಅಣ್ಣ-ತಮ್ಮಂದಿರು, ಅಕ್ಕ-ತಂಗಿಯರು, ಗೆಳೆಯ-ಗೆಳತಿಯರು, ಎಂದು ಹೇಳುವರಿವರು. ಆದರೇನು ದೇವಾ, ಅವರೆಲ್ಲ ಸೂರೆಗಾರರಲ್ಲವೆ, ನಿನ್ನನು ಕದ್ದೊಯ್ಯಲು ಬಂದ ಕಳ್ಳರಲ್ಲವೆ ಅವರು? ಹೇಳು, ಹೇಳು, ನಿಜವ ಹೇಳು ಎನಗೆ ಒಂದು ಬಾರಿ, ಅಂತರಾತ್ಮಾ, ಸಾಕು ಸಾಕಿನ್ನು ಇವರ ಸಂಗ. ಇವರ ಹಾವಳಿ ನಿಲಿಸಿ ನೀ ನೆಲೆಯಾಗು ಎನ್ನಲ್ಲಿ, ಪ್ರಭುವೆ. ಅಹಾ, ಏನು ಈ ಆಟ! ನಿನ್ನೊಡನಾಟ! ಈ ಪ್ರೇಮದ ಕೂಟ! ಒಂದರೆಕ್ಷಣವಾದರೂ ಎಂತಹ ಸುಖಸಮಾಧಿ ಇದು! ನೀನೆ ಎಲ್ಲರಲ್ಲಿಯೂ ತೋರಿ ಅನಂತ ಕಾಲ ನಡೆಸಬಾರದೆ, ಈ ಆನಂದದ ಆಟ ನೋಟವ ಎನ್ನ ಪ್ರಾಣೇಶ್ವರಾ ?

೩೩

ನಾನಿನ್ನು ಕೇಳುವವನಲ್ಲ. ನಿನ್ನೆಡೆಗೆ ರಭಸದಿಂದ ಹೊರಟಿರುವೆ. ಬೇಡ, ಬೇಡ, ಸ್ವಾಮಿ, ಈ ಬಣ್ಣದ ಆಟಿಕೆಗಳನು ಎನ್ನ ಹಾದಿಯಲಿ ಹರವಬೇಡ; ಹುಡುಗನನು ಈ ಪರಿ ಮೋಸಗೊಳಿಸಬೇಡ. ಹಸಿದ ಕೂಸನು ತಾಯ ಎಡೆ ಹೋಗಗೊಡು. ಅದನು ತಡೆದು ಋಣ ಪಾಪವ ಕಟ್ಟಿಕೊಳಬೇಡ. ಮಗು ತಾನೇನ ಮಾಡಬಲ್ಲದು ಹೊನ್ನಿನ ಹೂಗಳನು ಬೀದಿಯಲಿ ಚಲ್ಲಿ ಅದನು ರಮಿಸಿದರೆ? ಪಾಪ, ಆಡಿ ಆಡಿ ಹೊತ್ತು ಕಳೆದು, ಹೆಚ್ಚು ಹಸಿದು, ಹತಬಲವಾಗಿ ನಡುಹಾದಿಯಲಿ ಬಾಯಬಿಡುವದು ತಾಯ ಹಾಲಿಗೆ! ಆ ಮರುಗು ಕಟ್ಟಿಕೊಳಬೇಡ ದೇವಾ. ಬಿಡು ಈ ಛಲವ. ಬಿಲ್ಲಿನಿಂದ ಹೊರಟ ವೀರನ ಬಾಣದಂತೆ ಎನ್ನನು ಬರಗೊಡು ನಿನ್ನೆಡೆಗೆ. ಎನ್ನ ನಿಶ್ಚಯವ ಕೊನೆಗಾಣಿಸು, ಅಂತರಾತ್ಮಾ.

೩೪

ರಾಜಕಾರ್ಯವ ಮಾಡಲು ಹೊರಟೆ! ದೊಡ್ಡ ರಾಜಕಾರಣಿ ಪುರುಷನಲ್ಲವೆ ನಾನು! ಏನು ನನ್ನ ಸಂಭ್ರಮ! ಈಗ ಎನ್ನ ಹೆಮ್ಮೆಯ ನೋಡಿ ಎನಗೆಯೆ ನಗು ತುಂಬುತಿದೆ. ಯಾರು ಕೇಳಬೇಕು ಎನ್ನನು, ಎನ್ನಿಂದೇನಾಗಬಲ್ಲದು, ಸ್ವಾಮೀ?

ರಾಜರಾಜೇಶ್ವರಾ, ನಿನ್ನನು ಕೇಳದೆ ಹೇಳದೆ, ನಿನ್ನ ಆಣತಿಯ ಪಡೆಯದೆ ನಿನ್ನ ರಾಜ್ಯದಲಿ ಕೆಲಸ ಕೈಕೊಳ್ಳುವವ ನಾನಾರು? ಇಷ್ಟೊಂದು ತಿಳಿಯಬಾರದೆ ಎನಗೆ ಪ್ರಭುವೇ? ನಿನ್ನೋಲಗವ ತೋರು ದೇವಾ, ನಿನ್ನೋಲಗದಲಿ ತೊತ್ತಾಗಿರಿಸಿ ಎನಗೆ ಕಾರ್ಯವ ಬೆಸಸು. ಎನ್ನಹಂಕಾರವಳಿಯಿತು, ಎನ್ನ ಸೊಕ್ಕು ಮುರಿಯಿತು. ಇನ್ನು ಕೃಪೆಮಾಡಿ ಎನ್ನ ಕೈಯಿಂದಾಗುವ ಕೆಲಸವ ಕೊಟ್ಟು ಕರುಣಿಸು ಅಂತರಾತ್ಮಾ. ಇನ್ನು 'ನಾ ಮಾಡಿದೆ' 'ನಾ ಮಾಡುವೆ' ಎಂಬ ಜೊಳ್ಳು ನುಡಿಯನಾಡುವುದಿಲ್ಲ ಪ್ರಭುವೇ, ತಪ್ಪು ತಪ್ಪಾಯಿತು, ಕ್ಷಮಿಸು, ಕ್ಷಮಿಸು.

೩೫

ಅಯ್ಯೋ, ಏನು ಹೇಸಿ ಜೀವನ ಎನ್ನದು ಈ ವರೆಗೆ! ನನ್ನ ಮನವೆಂದರೊಂದು ವೇಶಿಯ ವಿಲಾಸವಾಟಿಕೆ ಇಲ್ಲವೆ ವ್ಯಭಿಚಾರಿಯ ಅಂತರ್ಗೃಹ. ಸಿಕ್ಕಸಿಕ್ಕವರು ಬಂದು ಬೇಕಾದ ಚಲ್ಲಾಟವ ಮಾಡಬೇಕು. ಆಡಬಾರದ ಆಟ, ನೋಡಬಾರದ ನೋಟ, ಕೂಡಬಾರದ ಕೂಟ, ಕ್ಷಣಿಕ ಸುಖಕ್ಕಾಗಿ ಎನ್ನ ಎಲ್ಲ ಮಾಟವಾಯಿತಲ್ಲಾ. ಅಯ್ಯೋ ಈಗ ಮರಗುವೆ ನಾನು. ನಾ ಹಾಳು ಮಾಡಿದ ದೇಹ ಮನಃಶಕ್ತಿಗಳ ಕಡೆಗೆ ನೋಡಿ ಎದೆಯೊಡಿಯುತಿದೆ. ಏನು ಮಾಡಲಿನ್ನು? ಇದಕ್ಕುಪಾಯ ವಿಲ್ಲವೆ? ಇನ್ನಾದರೂ ಬುದ್ಧಿ ಬರುವದೆ? ಸತೀತ್ವವೆ ನಿಜ

ಸುಖದ ಸಿಧಿಯೆಂದು ಒಮ್ಮೆಯಾದರೂ ವೇಶಿಗೆ ತಿಳಿಯಲಾರದೆ? ಏಕಪತ್ನೀತ್ವವೆ ಸುಖಸಾಧನವೆಂಬುದು ವಿಟನಿಗೆ ಒಮ್ಮೆಯಾದರೂ ಹೊಳೆಯಲರಿಯದೆ? ಹಾಗೆ ನನಗೆ ಹೊಳೆಯಬಾರದೆ ಏಕನಿಷ್ಠ ಭಕ್ತನಾಗಬೇಕೆಂದು? ಸಾಕಾಯ್ತು, ಅತ್ತಿತ್ತ ಅಲೆದಾಡುವ ಈ ಅನುಭವ. ಹಾದಿಗೆ ಕೊಟ್ಟ ಬುತ್ತಿಯನು ಹಳಸಿಸಿ ಹಸಗೆಡಿಸಿದೆನು. ಎದುರಿಗನನ್ನಿರಿಯಲು ನೀ ಕೊಟ್ಟ ಅಲಗಿನಿಂದ ಎನ್ನನೆ ಇರಿದುಕೊಂಡು ಗಾಸಿಯಾದೆನು ಸ್ವಾಮೀ. ಪಶ್ಚಾತ್ತಾಪವಾಯಿತು, ಇನ್ನು ನೀನೆ ಕರುಣಿಸಿ ಕಾಪಾಡು ಅಂತರಾತ್ಮಾ. ಎನ್ನ ಸೋತ ಮನವ ಸೆಳೆದು ನಿನ್ನೊಳು ಹೊಗಿಸು. ವಿಷವನು ಬಿಡಿಸಿ, ಅಮೃತವನುಣಿಸಿ ಬದುಕಿಸು ಈ ಬಾಲಕನನು ದೇವಾ.

## ೩೬

ಸಂಸಾರದ ಆಸೆ ಹುಟ್ಟಿ ತೊಳಲುತಿರುವೆ, ದೇವಾ. ನಿನ್ನ ಆಸೆ ಬಲಿತು ಆಕಾಂಕ್ಷೆಯಾಗಿ ಎನ್ನನು ಹಗಲಿರುಳು ಪೀಡಿಸುತಿಹುದು, ಪ್ರಭುವೇ. ನಿನ್ನನು ನೋಡಬೇಕು, ನಿನ್ನನು ಕೂಡಬೇಕು, ನಿನ್ನೊಡನಾಡಬೇಕು ಎಂಬಾಸೆ ಎನ್ನ ಹೊಟ್ಟೆಯಲಿ. ಆದರೆ ನಾ ಸ್ಥೂಲ ನೀ ಸೂಕ್ಷ್ಮ, ನಾ ಸಾಕಾರ ನೀ ನಿರಾಕಾರ, ನಾ ಜಡ ನೀ ಚೇತನ, ನಾ ಪಾಪಿ ನೀ ನಿಷ್ಪಾಪಿ, ನಾ ದುಃಖಿ ನೀ ಸುಖಿ, ಎನ್ನ ಕುಲವೆ ಬೇರೆ ನಿನ್ನ

ಕುಲವೆ ಬೇರೆ. ಬೀಗತನವಾಗುವ ಪರಿ ಯಾವುದು ದೇವಾ ಈ ಇಬ್ಬಗೆ ಇರುವಾಗ? ಎನ್ನಲ್ಲಿ ಅಸಾಧ್ಯ ಆಸೆಯನೂರಿ ಪೀಡಿಸುತಿರುವಿ, ದೇವಾ. ಇದು ಆನೆ ಆಗಸಕೆ ಹಾರಬಯಸಿ ದಂತೆ, ಕಾಗೆ ಹಂಸವಾಗಲೆಣಿಸಿದಂತೆ, ಸ್ವಾಮೀ. ಇದು ತಿಳಿ ಯದೆ ಎನಗೆ? ಆದರೇನು, ಈ ಬಯಕೆಯ ಬಿಡಬಲ್ಲನೆ ನಾನು? ಇಲ್ಲ, ಇಲ್ಲ, ಸರ್ವಥಾ ಇಲ್ಲ. ದೇಹ ಸವೆದು ಕಡ್ಡಿಯಾದರೂ ಈ ಆಸೆ ಬಿಡದು, ಜೀವ ಸೋತು ಸಣ್ಣದಾದರೂ ಈ ಆಸೆ ಅಳಿಯದು. ಕರುವ್ರ ಇನ್ನಾರನರಸುವುದು ಆವನಲ್ಲದೆ, ಕೂಸು ಇನ್ನಾರ ಮೆಚ್ಚುವುದು ತಾಯನಲ್ಲದೆ? ಅಂತರಾತ್ಮಾ, ನಿನಗೆ ಮೊರೆಯಿಡುವೆ, ನಿನಗೆ ಶರಣುಹೋಗುವೆ. ಪುಷ್ಪಪರಿಮಲ-ದಂತೆ ಮಾಡಿ ಎನ್ನನು ಹರಿಬಿಡು ನಿನ್ನೆಡೆಗೆ, ಸೂರ್ಯಕಿರಣ ದಂತೆಸಗಿ ಸಾಗಗೊಡು ನನ್ನನು ನಿನ್ನ ಪಾದದೆಡೆಗೆ. ಮಾಯ ಮಾಡಿ ಮುಗಿಲಗೂಡಿಸಿ ಎನ್ನನು ಒಂದುಗೂಡಿಸು ನಿನ್ನಲಿ ಕರುಣಾಕರಾ. ಇನ್ನಾವ ಬೇರೆ ಹಾದಿ ಎನಗೆ!

## ೩೭

ಗುರುವಿಲ್ಲದೆ ಗತಿಯಿಲ್ಲವೆನ್ನುವದು ಲೋಕ. ಇದು ನಿಜವ್ರೇ?

ನಾನು ಓದಿದ್ದು ಕೇಳಿದ್ದು, ನುಡಿದದ್ದು ನಡೆದದ್ದು, ಎಲ್ಲ ಹೊಳೆಯಲ್ಲಿ ಹುಣಸೀಹಣ್ಣು ತೊಳೆದಂತಾಯಿತೆ? ಇನ್ನೇನು ಗತಿ ಎನಗೆ ದೇವಾ, ಇನ್ನಾರು ಗತಿ ಎನಗೆ? ನಾನಂತೂ

ಅನುಭವವೆ ಗುರುವೆಂದು, ಅನುಭವಕೆಯೆ ಮೊರೆಯಿಟ್ಟು, ಅನುಭವವನೆ ಅನುಸರಿಸುತ ಬಂದೆ, ಅದು ತಪ್ಪೆ ಅಂತರಾತ್ಮಾ ? ಅನುಭವವೆ ಮೂರ್ತಿಗೊಂಡು ಗುರುವಾಗುವುದಿಲ್ಲವೆ ಎಮಗೆ? ಹೇಳು ಅಂತರಾತ್ಮನೇ ಹೇಳು. ನಿನ್ನ ಸತ್ಯವಾಣಿಯಿಂದ ಎನ್ನ ಸಂಶಯವ ಪರಿಹರಿಸು, ಪ್ರೈವೆತ್ತ ಅನುಭವವೆ ಗುರುದೇವನೆಂದು ಸಾರು, ಅವನನೆ ನಾನು ನಿತ್ಯ ಆರಾಧಿಸುವಂತೆ ಮಾಡು, ಸ್ವಾಮೀ.

*   *   *   *

ಗುರುದೇವಾ, ಎನ್ನ ಗುರುದೇವಾ, ಎಲ್ಲಿರುವೆ? ಹಗಲಿರುಳು ಹಾರೈಸಿ ಹಂಬಲಿಸುತಲಿರುವೆ ನಿನಗಾಗಿ, ಎಲ್ಲಿರುವೆ? ಎನ್ನ ಮನವ ಮಥಿಸಿ ಅಮೃತವ ತೆಗೆವ ಮಂದರನೆ, ಎಲ್ಲಿರುವೆ? ಎನ್ನ ಹೃದಯಗಹ್ವರದಲಿ ದೀಪದಂತೆ ಬೆಳಗುವ ದಿವ್ಯ ಶಕ್ತಿಯೆ, ಎಲ್ಲಿರುವೆ? ತೋರು ತೋರು, ಎನಗೊಮ್ಮೆ. ತನುಗುಣವ ತೊಡೆದು ನವತರಣಿಯ ತೇಜವ ತೋರಿ, ತತ್ವದ ದಾರಿಯ ನಡೆಸಿ ಎನ್ನಂತರಂಗವ ತಣಿಸು, ಧನ್ಯ ಮಾಡು ಎನ್ನನು, ಗುರುದೇವಾ.

## ೩೮

ಗುರುದೇವಾ, ನಿನಗಾಗಿ ಬಳಲಿ ಬಳಲಿ ನಾನು ಬಾಯಿಬಿಡುತಿರುವಾಗ, 'ಗುರು' 'ಗುರು' ಎಂದು ಹಲವರು ಎನ್ನನು ಬೆನ್ನಟ್ಟುತಿರುವರು! ಏನು ನೋಟವಿದು! ನೀ ನೋಡಿ

ನಗುತಿರಬಹುದಲ್ಲವೆ ? ನಾನೇ ನೋಡದ ಬೆಳಕನು ಅವರಿಗಿನ್ನೇನು ತೋರಲಿ ? ನಾ ಕಾಣದ ಕಣಸನು ಅವರಿಗಿನ್ನೇನುಸುರಲಿ ? ತಿರುಕ ತಿರುಕನ ಬೇಡಿದಂತಾಯಿತು ಈ ನೋಟ ! ಆದರೇನು, ಅವರೆನ್ನ ಬೆನ್ನ ಬಿಡರು. ಎಂತಹ ನಿರ್ಮಲ ನಂಬುಗೆ ಅವರದು ? ಮೊಲೆಗೂಸು ತಾಯನು ನೆಚ್ಚುವಂತೆ ಅವರು ಎನ್ನನು ನೆಚ್ಚಿ ಬರುತಿರುವರು, ಸ್ವಾಮೀ. ನಾ ಯೋಗ್ಯನೆ ಆ ನೆಚ್ಚಿಗೆಗೆ ? ಸರ್ವಥಾ ಅಲ್ಲ, ಅವರು ನೆಚ್ಚುವದು ನನ್ನನಲ್ಲ. ಎನ್ನಲ್ಲಿರುವ ನಿನ್ನನೆ, ಅವರನು ಶಾಂತಗೊಳಿಸುವ ಭಾರ ನಿನ್ನದು, ಸ್ವಾಮೀ. ನನಗಾಗಿ ಅಲ್ಲದಿದ್ದರೂ ಅವರಿಗಾಗಿ ನಿನ್ನಮೃತಧಾರೆಯ ತೊರೆ ಬಿಟ್ಟು ತೃಪ್ತಿಬಡಿಸು, ಅಂತರಾತ್ಮಾ. ನೆಚ್ಚಿದವರನು ನಿಶ್ಚಯವಾಗಿ ಕಾಯುವೆ, ಎಂಬ ಬಿರುದು ನಿನ್ನದು. ನಿತ್ಯಸತ್ಯದ ನಿಚ್ಚಳ ದಾರೀ ತೋರು, ದುಃಖಸಮುದ್ರವ ದಾಟಿಸು, ದೇವಾ. ಇನ್ನು ಆತುರನ ಆಶೆಗೆಡಿಸಿ ಅಡವಿಯ ಸೇರಿಸಬೇಡ ಪ್ರಭುವೇ.

## ೩೯

ಎನ್ನಂತರಂಗದರಸಾ, ನಿನ್ನ ರಾಜ್ಯವ ಬಿಟ್ಟು ಇನ್ನೆಷ್ಟು ದಿನ ನೀ ಹೊರಗಿರಬೇಕೆನ್ನುವಿ ? ನೀ ಹೀಗೆ ಹೋಗಲು ಇಲ್ಲಿ ಎಲ್ಲ ಅರಾಜಕವಲ್ಲವೆ ? ನೀನೀಗ ಎಲ್ಲಿರುವಿಯೊ ಎತ್ತ ಇರುವಿಯೋ ? ಬೇಸತ್ತೆನು ನಾನು ಕಾದು ಕಾದು. ಇನ್ನೇನು ಮಾಡಲಿ ? ಇಕೊ, ನಿನ್ನ ಪೂಜೆಗಾಗಿ ಸದ್ವಿಚಾರಕುಸುಮಗಳ-

ನಾರಿಸಿಟ್ಟಿರುವೆ. ಅವುಗಳ ಮಧುರ ಪರಿಮಳವಾದರೂ ನಿನ್ನ-ನಿತ್ತ ಬರಮಾಡಲಿ. ಎನ್ನ ಹೃದಯಪುಟದಲ್ಲಿ ಉತ್ಕಟ ಪ್ರೇಮ-ಧೂಪವನು ಹಾಕಿರುವೆ. ಅದು ನಿನ್ನತ್ತ ಸುಗಂಧವನು ಜೀರುವು-ದಿಲ್ಲವೆ? ಸದಾಚಾರದ ಸುಮನಮಾಲೆಯನು ಕೈಯಲಿ ಹಿಡಿದು-ಕೊಂಡು ನಿಂತಿರುವೆ. ಅಯ್ಯೋ, ಇದು ಬಾಡುವುದಿಲ್ಲವೆ ನೀ ತಡಮಾಡಿದರೆ? ಸ್ವಾಮೀ, ಇನ್ನೆಷ್ಟು ತಡೆಯಲಿ? ನಾ ಮಾಡುವದನು ಮಾಡಿಬಿಡುವೆ. ಇಕೊ, ನನ್ನ ಸರ್ವಸ್ವವನ-ರ್ಪಿಸಿಬಿಡುವೆ. ಕೊಡುವ ಕೆಲಸ ನನ್ನದು ಕೊಳ್ಳುವದು ನಿನ್ನದು. ಇನ್ನು ಎನ್ನನು ನಿನ್ನ ಕೈಗೊಳಲನೆ ಮಾಡಿ ನಡೆಸುವ ಭಾರ ನಿನ್ನದಲ್ಲದೆ ನನ್ನದಲ್ಲವಯ್ಯಾ, ಅಂತರಾತ್ಮಾ.

## ೪೦

ಹುಡುಕಿ ಹುಡುಕಿ ಬೇಸತ್ತೆನು ದೇವಾ, ನಿನ್ನನು. ಏನು ನಿನ್ನ ಮಾಯೆ ಇದು! ನೀನೆಲ್ಲಿರುವಿ ಎಂಬುದನು ಬಲ್ಲೆ ನಾನು. ಆದರೇನು? ಕೈಗೆ ಸಿಕ್ಕಲೊಲ್ಲೆಯಲ್ಲಾ! ಮಾಯಾ ಮೃಗದಂತೆ ಹೀಗೇಕೆ ಕಾಡಿಸುವೆ ಎನ್ನನು? ಸುತ್ತು ಜಗದೊಳ-ಗಿದ್ದು ಎನಗೆ ಕಾಣದೆ ಹೋಗುವಿ. ಎನ್ನ ಮೈ ರೋಮ ರೋಮಗಳೊಳಗಿದ್ದು ಸೋಂಕದೆ ಇರುವಿ? ಯಾವ ಇಂದ್ರ-ಜಾಲವಿದು ನಿನ್ನದು? ಒಮ್ಮೊಮ್ಮೆ ಕಂಡರೂ ಕೈಗೆ ಬರದಿರುವಿ. ನಿನ್ನನು ಅವಚಿ, ಅಪ್ಪಿ, ಎನ್ನವನನ್ನಾಗಿ ಮಾಡಿಬಿಡುವ ತವಕ-

ವೆಸಗೆ, ಒಡೆಯಾ. ಎಲ್ಲೆಲ್ಲಿಯೂ ಇದ್ದು ತಿಳಿ ತೆರೆಯ ಸುರೆ ಮಾಡಿ ಎನ್ನನು ಎಷ್ಟೊಂದು ಮೋಸಗೊಳಿಸಬೇಕೆನ್ನುವಿ, ಜೀಯಾ? ಕೈಗೆ ಬಂದ ತುತ್ತು ಬಾಯಿಗೆ ಬಾರದಾಗಿದೆ. ಮಗ್ಗುಲಲ್ಲಿದ್ದ ಮಾತೆ ಮೊಲೆಯನುಣಿಸದಿದ್ದರೆ ಮಗುವಿನ ಪಾಡೇನು, ಅಂತರಾತ್ಮಾ ?

## ೪೧

ಎಂತಹದೀ ಎನ್ನ ಜೀವ, ದೇವಾ? ಗಾಳಿಗೊಡ್ಡಿದ ಸೊಡರಿನಂತೆ, ನೀರಗುಳ್ಳೆಯಂತೆ, ಹುಲ್ಲುಮೇಲಿನ ತುಂತುರದಂತೆ ಎನ್ನನು ಇರಿಸಿದೆಯಲ್ಲಾ ಇಲ್ಲಿ! ಇಂತಹ ಕ್ಷುದ್ರ ಕ್ಷಣಿಕ ಜೀವಕ್ಕೆ ಮತ್ತೆ ಎಂತೆಂತಹ ಆಶೆಗಳ ತಳಕನ್ನು ಹಾಕಿರುವೆ? ಸಾಗರದ ತೆರೆಗಳಷ್ಟು ಅವು ಅನಂತ, ಆಕಾಶದಷ್ಟು ಅವು ವಿಶಾಲ. ಈ ಚಿಕ್ಕ ಚಿತ್ತದಲ್ಲಿ ಅವುಗಳಿಗೆ ನೀನು ಎಡೆಗೊಟ್ಟುದೆ ಒಂದು ಚಮತ್ಕಾರ. ನಾನು ಪೂರೈಸಬಲ್ಲೆನೆ ಅವುಗಳನು? ಕಡ್ಡಿಯಿಂದ ಗುಡ್ಡವ ಎತ್ತಹೇಳಬೇಕೆ ಎನಗೆ? ನಿಚ್ಚಣಿಕೆ ಏರಿ ಮುಗಿಲು ಮುಟ್ಟಲಾಜ್ಞಾಪಿಸಬೇಕೆ ನೀನು? ಉಗುರಿನಿಂದ ಮರವ ಕಡಿಯಲು ಬೆಸಸಬೇಕೆ, ದೇವಾ? ಇದು ಚಂದವೆ ನಿನಗೆ? ಎನ್ನ ಜೀವಶಕ್ತಿ ಎತ್ತ ಈ ಆಶೆಗಳ ಪರಿಮಾಣವೆತ್ತ? ಏನು ಈ ವಿಸಂಗತಿ! ಇದೇ ಎನ್ನ ದುಃಖದ ಬೀಜವಲ್ಲವೆ ಸ್ವಾಮೀ! ನಿನಗೆ ಇದೊಂದು ಆಟ, ನನಗೆ ಪ್ರಾಣಸಂಕಟ.

ಸಾಕು ಬಿಡು, ಇನ್ನು ಈ ಚೇಷ್ಟೆ. ನಿಲ್ಲಿಸು, ಎನ್ನ ಜೀವದ ಬೇಟೆಯಾಡುವದನು. ಎನ್ನ ಆಶೆಗಳನಾದರೂ ಕಿರಿದಾಗಿರಿಸು, ಎನ್ನ ಶಕ್ತಿಗಳನಾದರೂ ಹಿರಿದಾಗಿ ಮಾಡು. ಏನಾದರೂ ಅಳತೆ ಯಿರಲಿ ನಿನ್ನ ರಾಜ್ಯದಲಿ, ಅಂತರಾತ್ಮಾ.

೪೨

ಇದೆನ್ನಂತರಂಗದ ಆರ್ತ ನುಡಿಯು ಸ್ವಾಮೀ, ಇದನಾದರೂ ಕೇಳು. ಈ ಎನ್ನಂತರಾಲಾಪವ ಈಗ ಕೇಳದಿರೆ ಎನಗೂ ನಿನಗೂ ಇನ್ನು ಬಿಡುಗಡೆ ನಿಶ್ಚಯ. ಇನ್ನಿರಲಾರೆ ಹೀಗೆ, ಇನ್ನು ತಾಳಲಾರೆ ಈ ಸ್ಥಿತಿಯನು. ಈ ಎನ್ನೆದೆಯೊಳಗಣ ಅಳಲೆ ಎನ್ನ ಹೆಚ್ಚಿನ ಸಾಧನ. ನಿನ್ನ ಕಠಿಣ ಹೃದಯವ ಕರಗಿಸಲು ಎನ್ನಲ್ಲಿ-ನ್ನೊಂದುಪಾಯವಿರುವದೆ ದೇವಾ? ಇಷ್ಟೇಕೆ ಉಪೇಕ್ಷಿಸುವೆ? ನೋಡು, ಎನ್ನಕಡೆಗೊಮ್ಮೆಯಾದರೂ ನೋಡು. ಹಗಲಿರುಳು ಕಾದುಕೊಂಡಿರುವೆ ನಿನ್ನ ದಾರಿಯನು. ನಿನ್ನ ವಿರಹದಲಿ ಕ್ಷಣ ವೊಂದು ಯುಗವಾಗಿದೆ, ಜೀವಗಳಿಂದ ತುಂಬಿದ ಜಗವೊಂದು ಅಟ್ಟರಣ್ಯವಾಗಿದೆ. ,ಈ ಎನ್ನ ದೇಹಜೀವಗಳು ಹೊರಲಾರದ ಭಾರವಾಗಿವೆ. ಭವ ಒಂದು ಬಂಧನವಾಗಿದೆ. ಬಿಡಿಸಯ್ಯಾ, ನೀ ಬಂದು ಎನ್ನ ಹೃದಯಮಂದಿರದಲಿದ್ದು ಈಬಂಧನವ ಬಿಡಿಸಯ್ಯಾ, ಈ ಬಳಲಿಕೆಯ ನೀಗಿಸಯ್ಯಾ. ಎನ್ನ ಮನವು ಅಮಲವಾಗಿ ನಿನ್ನ ಮನೆಯಾಗಲಿ, ಎನ್ನ ಭಾವವು ನಿನ್ನುದಯದಿಂದಂದವಾಗಲಿ.

ಎನ್ನಿಂದಸತ್ಯವ ಬಿಡಿಸು, ಸತ್ಯವ ನುಡಿಸು, ವೀರಕರ್ಮವ ಮಾಡಿಸು, ನಿನ್ನವರ ಕೂಡಿಸು. ಎನ್ನ ಜೀವನವು ನಿನ್ನ ಜೀವನ ದಂತೆ ತೇಜೋಮಯ, ಪ್ರಭಾವಪೂರ್ಣ, ನಿರ್ದುಷ್ಟ, ಸರ್ವಹಿತಕರ, ಲೀಲಾಮಯ ಹೀಗೆ ಆಗಲಿ. ದೇವಾ, ಇದನೆ ಸೆರೆಯೊಡ್ಡಿ ಬೇಡುವೆ. ಬಾ, ಇನ್ನು ತಡವನು ತಡೆಯಲಾರೆ, ಅಂತರಾತ್ಮಾ.

೪೩

ಈಹೊತ್ತು ಎನ್ನ ಹುಟ್ಟಿದ ದಿವಸ. ಈ ದೇಹವು ಜನ್ಮ ತಾಳಿದ ದಿವಸ, ವರುಷಕ್ಕೊಮ್ಮೆ ನೆನಪಾಗುವದು— ಅದೃಶ್ಯದಿಂದ ದೃಶ್ಯದೃಷ್ಟಿಗೆ ನಾನು ಬಂದುದರ ನೆನಪಿದು. ಆದರೆ ಈ ನೆನಪಿನಿಂದೇನು ? ವರುಷದಲ್ಲಿ ಪೃಥ್ವಿ ಸೂರ್ಯನ ಪ್ರದಕ್ಷಿಣೆಯ ಮುಗಿಸಿತು, ಮಹನೀಯರು ಎಂತೆಂತಹ ಮಹತ್ಕಾರ್ಯಗಳನು ಮಾಡಿದರು ಒಂದೇ ವರುಷದಲಿ. ಆದರೆ ನಾನೇನು ಮಾಡಿರುವೆ, ದೇವಾ? ನಾನೇನು ಶತಕೃತ್ಯ ಮಾಡಿರುವೆನೆಂದು ನೆನೆಸಬೇಕು ಈ ದಿನವ ದೇವಾ ? ತಿರುಗಿ ನೋಡಲು, ನಾನು ವರುಷದಲಿ ನಡೆದ ದಾರಿ ಎಷ್ಟು ? ಇಂತಹ ಪರಿ ಏಕೆ ಹುಟ್ಟಿಸಿ ಬೆಳೆಸಿದೆ ಎನ್ನನು ಸ್ವಾಮೀ ? ಇಂಥ ಪರಿ, ನನಗೆ ಈ ಹುಟ್ಟಿದ ನೆನಪೇಕೆ ಕೊಡುವೆ ? ಆನೆಗೆ ಆನೆಯ ಶಕ್ತಿಯಾದರೂ ಆಡಿಗೆ ಆಡಿನ ಶಕ್ತಿ ಬೇಡವೆ? ಈ ಪರಿ ದುರ್ಬಲನನ್ನಾಗಿ ಬದುಕಿಸುವುದಕಿಂತ ಮುಗಿಸಿ ಬಿಡು ಈ ಜೀವನಯಾತ್ರೆಯ ! ನಿನ್ನ ಬಲದ ಭಾಂಡಾರ ಬಯ-

ಲಾಯಿತೆ! ಅಥವಾ ನೀನೆ ಈಗ ಕೃಪಣನಾದೆಯಾ ? ನಾನೊಲ್ಲೆ ನೊಲ್ಲೆ ನೀಪರಿಯ ನೆನಪು-ಹುಟ್ಟಿದ ದಿನ ಸಾವಿನ ದಿನವಾಗಲೆಂದು ಹಾರೈಸುವಂತಾಗಿದೆ ಎನಗೆ. ಎನ್ನನು ಬದುಕಿಸಿ ಬಾಳಿಸುವು ದಿದ್ದರೆ ಗಿಡಬಳ್ಳಿಗಳು ಚಿಗಿಯುವಂತೆ ಎನ್ನ ಶಕ್ತಿಗಳೆಲ್ಲ ಚಿಗಿಯಲಿ, ಅವುಗಳ ಹೂ ಭೂಮಿತಾಯಿಗೆರಗುವಂತೆ ಎನ್ನ ದೇಹಮನ ಪ್ರಾಣಗಳೆಲ್ಲ ನಿನ್ನ ಚರಣಕೆರಗಲಿ ; ಅವುಗಳ ಹಣ್ಣೆಲ್ಲ ಪ್ರಾಣಿ ಗಳಿಗೆ ಅನ್ನವಾಗುವಂತೆ, ಎನ್ನ ಕರ್ಮಗಳೆಲ್ಲ ವಿಶ್ವಕುಪಕಾರಕ ವಾಗಲಿ. ಈ ಪರಿ ಬಾಳಿಸು ದೇವಾ. ಇದನ್ನೇ ಬೇಡುವೆ ಈ ದಿನ, ಎನ್ನ ಅಂತರಾತ್ಮಾ.

೪೪

“ದೇವಾ,' ‘ದೇವಾ' ಎಂದು ಜಪಮಾಡಿ ಮೊರೆ ಇಟ್ಟರೆ ನೀನೊಲಿದು ಇಷ್ಟವ ಸಲಿಸುವಿ ಎಂದರೆಮ್ಮ- ವರು ! ಜಪ ಮಾಡಿ ಮಾಡಿ ದಣಿದೆನೀಗ. ನಿನ್ನ ಕೃಪೆಯ ದಾರೀ ನೋಡಿ ನೋಡಿ ಕಟ್ಟಾದವೆನ್ನ ಕಣ್ಗಳು. ಬೆಳೆಯಬಲ್ಲದೆ ಜಪದಿಂದ ಭೂಮಿ, ಅದನು ಹರಗಿ ಹಸನ ಮಾಡಿ ಬಿತ್ತಿ ಬೇಸಾಯ ಮಾಡದೆ ? ಫಲ ಕೊಡಬಲ್ಲುದೆ ಪೂಜಿಸಿದೊಡೆ ಗಿಡ, ಅದಕೆ ಕಟ್ಟೆ ಕಟ್ಟಿ ನೀರೆರೆದು ಸಲಹದೆ? ನುಡಿವುದೇ ಬರೀ ಅರ್ಚನೆಯಿಂದ ವೀಣೆ, ಅದರ ತಂತೀ ಬಿಗಿದು ತಾಳವನರಿತು ಬಾರಿಸದೆ ? ಕೆಲಸ ಕೊಡುವುದೇ ಪೂಜೆಯಿಂದ ಕೈದು, ಮಸೆದು

ಗಂಡುಗೈಯಿಂದ ಅದನು ನಡೆಸದೆ? ನೀ ಮಾಡಿದುದೆಲ್ಲ ಹೀಗೆ ಕಟ್ಟಿಗೊಳಗು, ಸ್ವಾಮೀ. ಆ ಕಟ್ಟನರಿತು ಅದರಂತೆ ಮಾಡಿದರೆ ಮಾತ್ರ ಯಶದಾಸೆ, ಇಲ್ಲದೊಡೆ ಎಲ್ಲ ನಿರಾಶೆ. ನಾನು ಆಲಸಿ, ಅಜ್ಞ, ಅಳಬುರುಕ. ಕೂತು ಜಪಮಾಡಿ ಸಾಧಿಸಬೇಕೆಂದೆ ಇಹ ಪರವ! ಈಗ ಹೊಳೆಯಿತು ಜಪದರ್ಥ, ನಿನ್ನ ನಿಜ ಹಾದಿ. ವಸ್ತುಧರ್ಮಗಳನು ಆದರದಿಂದ ತಿಳಿಯಲೆಸಗುವುದೇ ನಿನ್ನ ಜಪ, ಆ ಧರ್ಮಗಳಂತೆ ನಡೆದು ಲೋಕಹಿತ ಸಾಧಿಸುವುದೆ ನಿನ್ನ ತಪ, ಅದನೆಲ್ಲ ಶ್ರೀಪಾದಕ್ಕರ್ಪಿಸುವುದೆ ನಿನ್ನ ಪೂಜೆ, ಇಷ್ಟುಮಾಡಿ ನಿಶ್ಚಿಂತ, ನಿರಹಂಕಾರಿ, ನಿರಾಸಕ್ತ ಇರುವುದೆ ಮೋಕ್ಷ. ಅಲ್ಲವೆ ಅಂತರಾತ್ಮಾ ?

೪೫

ಎನ್ನೋರ್ವ ಬಂಧುವಿನ ಆಲಾಪವೇನಂದರೆ—'ಇದೇನು, ಈ ಸಂಸಾರದಲಿ ನಿಜಸುಖವನರಸುವದೀ ಜನ? ಇಲ್ಲಿ ಎಲ್ಲಿಂದ ಬರಬೇಕದು ? ಹಾ, ನನ್ನ ಜೀವನವೆಲ್ಲ ನಿರಾನಂದ ವಾಯಿತಲ್ಲ ! ಜಡವತ್, ಯಂತ್ರವತ್ ಈ ಸಂಸಾರಕರ್ಮಗಳನು ಮಾಡುತಿರುವೆ ನಾನು, ಆ ಉತ್ತುಂಗ ಹಿಮಾಚಲದ ಪವಿತ್ರ ತಪೋಭೂಮಿಯತ್ತ ಇಲ್ಲವೆ ಸತ್ಪುರುಷರ ಸಂಗದತ್ತ ಎಳಸುವ-ದೀಮನ,'—ಆತ್ಮಬಂಧುವೇ ಇಷ್ಟೊಂದು ನಿರಾಶೆಯೇಕೆ ? ಸಂಸಾರವನು ಕುರಿತು ಇಷ್ಟೊಂದು ಹೇಯಭಾವವೇಕೆ ? ಅದ-

ನಾದರೂ ಅವನೇ ಮಾಡಿಲ್ಲವೆ? ಅದೇನು ವಿಷಕೂಪವೆ? ಹಾಗಿದ್ದರೂ ಅದನು ಅಮೃತಮಯ ಮಾಡುವ ಮಾಟಗಾರಿಗೆ ಆತ್ಮನಲ್ಲಿಲ್ಲವೆ? ನೀನು ಹುಡುಕುತಲಿರುವುದು ಆತ್ಮಾನಂದ ಅದು ಸಂಸಾರದಲ್ಲಿಯೂ ಇಲ್ಲ, ಹಿಮಗಿರಿಯಡಿಯಲ್ಲಿಯೂ ಇಲ್ಲ. ಸತ್ಪುರುಷರ ಪಾದದೆಡೆಗೂ ಇಲ್ಲ. ಅದು ಆತ್ಮನಲ್ಲಿಯೆ ಇದೆ. ನಿರ್ಮಲಚಿತ್ತದ ಕೊನೆಯ ಮೊನೆಯ ಧಾರೆಯದು. ಆತ್ಮನು ಆನಂದಮಯನು, ಆನಂದಸ್ವರೂಪನು. ಆತ್ಮವೆ ಆನಂದ, ಆನಂದವೆ ಆತ್ಮ. ನಿರಾಲಂಬ ಸ್ವಯಂಭು ಸುಖವೆ ಆನಂದ, ಈ ಜ್ಞಾನಾನುಭವದಿಂದಲೆ ಆನಂದಪ್ರಾಪ್ತಿ. ಹೃದ-ಯಾಂತರದಲ್ಲಿ ಈ ಜ್ಞಾನದ ಸೆಲೆಯೊಡೆಯುವನಕ ಎಲ್ಲಿ ಹೋದರೇನು ಬಂದರೇನು, ಅಮೃತದ ಆಶೆಯೇಕೆ? ನಿಷ್ಕಾಮ ಸರ್ವಾರ್ಪಣಭಾವವೆ ಹೃದಯಕವಾಟದ ಕೈ. ಬಂಧುವೇ, ಅಲ್ಲಿ ಇಲ್ಲಿ, ಹೋಗಬೇಕೆನ್ನುವ ಆತುರವಿಲ್ಲದೆ, ಇದ್ದಲ್ಲಿ ಇದ್ದ ಹಾಗೆ ಈ ಸಾಧನವನಾರಂಭಿಸುವ. ಹೇ ಅಂತರಾತ್ಮಾ, ಈ ಸಾಧನ ಮಾಡಲು ನಮಗೆ ಬಲಶೀಲಗಳನು ದಯಪಾಲಿಸು.

೪೬

ಆಹಾ! ಆಕಾಶದ ಈ ತಾರಕೆಗಳು, ಈ ಅಗಣಿತ ತಾರಾಗಣ-ಕರೆಯು ಕಾಳರಾತ್ರಿಯಲಿ ಒಂದೊಂದೆ ಒಂದೊಂದೆ ಮೂಡಿ ನಿಶಾದೇವಿಯ ಮುಕುಟಮಣಿಗಳಂತೆ ನಭಮಂಡಲವ

ತುಂಬಿ ಬಿಡುತಿರುವವು. ತಮ್ಮ ತಮ್ಮ ಪರಿ ತೊಳಗುತ್ತ ಬೆಳಗುತ್ತ ಅನಂತ ಪಥದಲ್ಲಿ ಸಾಗಿರುವವು. ಅವುಗಳ ಮೂಡು ಮುಳುಗುಗಳನು ನಾನು ಪ್ರತಿನಿತ್ಯ ನೋಡುತಿರುವೆ. ಆದರೇನು, ಅವುಗಳ ಹುಟ್ಟುಸಾವುಗಳನರಿತವರುಂಟೆ ? ಅವು ಕಾಣುವುದೇಕೆ ಅಡಗುವುದೇಕೆ ಯಾರು ಬಲ್ಲರು ? ಅವುಗಳ ಮಿನುಗಿನಿಂದೇನು ಕತ್ತಲೆ ಹರಿಯುವುದೆ? ಇಲ್ಲ. ಪಥಿಕರಿಗೆ ದಾರಿ ಕಾಣುವುದೆ ? ಇಲ್ಲ, ಇಲ್ಲ. ಒಬ್ಬ ಬಡವನ ಮನೆಯಾದರೂ ಬೆಳಗುವುದೆ ? ಸರ್ವಥಾ ಇಲ್ಲ. ಆದರೂ ವಿಶ್ವದೇವಿ ಘನನೀಲ ಪಾತ್ರೆಯಲಿ ಈ ಮಲ್ಲಿಗೆಯ ಹೂ ತುಂಬಿ ತುಂಬಿ ಶಾಂತ ನಿಶಾಸಮಯದಲ್ಲಿ ನಿನ್ನ ಗೂಢ ಪಾದಗಳ ಮೇಲೆ ಸಿಚ್ಚ ಸಿಚ್ಚ ಎರಚುತಿರುವಳು. ಆ ಚಿಕ್ಕೆಗಳಲಿ ನನ್ನನೊಂದು ಚಿಕ್ಕೆಯ ಮಾಡು ದೇವಾ, ಆ ಮಲ್ಲಿಗೆಯ ರಾಶಿಯಲಿ ಎನ್ನನೊಂದು ಅಡವಿಮಲ್ಲಿಗೆ ಮಾಡಿ ಇರಿಸು ಸ್ವಾಮೀ. ಎನ್ನ ಹುಟ್ಟು ನಾನರಿಯೆ, ಎನ್ನ ಸಾವು ನಾನರಿಯೆ. ಯಾಕೆಂದು ಹೋಗುವೆ, ಏನೆಂದು ಬರುವೆ, ನಾನರಿಯೆ, ಬಂದುದೆಲ್ಲಿಂದ ಸಾಗುವುದೆಲ್ಲಿಗೆ ನಾನರಿಯೆ. ಇಲ್ಲಿರುವನಕ ಮಿಣುಕಿ ಮಿಣುಕಿ ಒಮ್ಮೆಯಾದರೂ ನಿನ್ನಡಿಯ ನೋಡಿದರೆ ಅದೇ ಎನ್ನ ಜೀವನಕೆಸಾರ್ಥಕ್ಯವು, ಜೀವದೊಡೆಯಾ. ಇದಕಾಗಿಯೆ ಮಿಡುಕುವೆ, ಇದನೆ ಬೇಡುವೆ, ಇದನೆ ಹಾಡುವೆ, ಕಾಡಿ ಕಾಡಿ ನಿನ್ನನು ಇದನೆ ಕೇಳುವೆ ಅಂತರಾತ್ಮಾ, ಕೊಟ್ಟು ಕಡೆಹಾಯಿಸು.

ಆಹಾ ! ಅತ್ತ ಸಭಾಂಗಣದಲ್ಲಿ ತಾರಾವಲಿ ಇತ್ತ ಧರಾಂಗಣದಲ್ಲಿ ದೀಪಾವಲಿ. ಏನಿದು ದೀಪೋತ್ಸವ ದೇವಾ, ನಿನ್ನ ದಿವ್ಯಾಂಗಣವೆಲ್ಲ ಭಕ್ತಿದೀಪಗಳ ಮಾಲೆಗಳಿಂದ ಮಿಂಚುತಲಿದೆ. ಜಡದಲ್ಲಿ ಚೇತನದ ಮಂದ ಪ್ರತಿಬಿಂಬ ಕಾಣುವಂತೆ ಮುಗಿಲಲಿರುವ ನಕ್ಷತ್ರಾವಲಿಯ ಛಾಯೆ ಇಲ್ಲಿ ಭೂಮಿಯಲಿ ತೋರುತಿದೆ. ಇಕೋ ಈ ಹೊಳೆಯಲಿ ಅನಂತ ದೀಪಗಳು ತೇಲುತ್ತ ಸಾಗುತಿವೆ. ಅವು ಹೋಗಿ ನಿನ್ನ ಪಾದಗಳನು ಮುಟ್ಟುವವು ಎಂದು ಭಾವಿಕರ ಶ್ರದ್ಧೆ ! ಸುಕುಮಾರ ಸುಂದರಿಯರ ಭಯಭಕ್ತಿ, ಅವರ ಸುಕೋಮಲ ಭಾವವೈಭವ, ಅವರ ಮೃದುಹೃದಯಾಂತರದಲಿರುವ ಅನಂತ ಅಸ್ಫುಟ ಆಕಾಂಕ್ಷೆಗಳು, ಅವರು ಹಚ್ಚಿ ತೇಲಿಸುವ ದೀಪಗಳೊಡನೆ ನಿನ್ನ ಚರಣಗಳೆಡೆ ಬರುತಿವೆ, ದೇವಾ. ಈ ವಿಶಾಲ ಜೀವನಪ್ರವಾಹದ ದಂಡೆಯಲಿ ನಾನೊಬ್ಬ ಮಾತ್ರ ಸುಮ್ಮನೆ ಸೋಮಾರಿಯಾಗಿ ಎಲ್ಲವನು ನೋಡುತ ಕುಳಿತಿರುವೆ ಚಿತ್ರದಂತೆ. ಏನು ಮಾಡಲಿ ಸ್ವಾಮೀ ? ಇನ್ನು ಸಾಕು ಈ ಆಲಸ್ಯ. ಎನ್ನ ತಂಗಿಯರು ಕಲಿಸಿದ ಪಾಠವನು ತೀಡುವೆ. ಈ ಕಾರ್ತಿಕೋತ್ಸವದಲ್ಲಿ ನಾನೂ ನನ್ನ ಹೃದಯದೀಪವನು ತೇಲಿಬಿಡುವೆ, ನಿನ್ನ ಚರಣಕೆ ಸಮರ್ಪಿಸುವೆ. ಅದನು ಸ್ವೀಕರಿಸಿ ಧನ್ಯಗೊಳಿಸು ಜೀಯಾ, ಅಂತರಾತ್ಮಾ.

ಎಂಥ ಪ್ರಶಾಂತ ನಟ್ಟಿರುಳಿದು ! ಶಾಂತಿ, ಸುತ್ತಲು ಸಾವಿನಂತಹ ಶಾಂತಿ ; ಶಾಂತಿ, ಎಲ್ಲೆಲ್ಲಿಯೂ ಮರಣಮಯ ಶಾಂತಿ. ಚಂದ್ರಮನ ತಂಗೈಗಳು ಭೂದೇವಿಯನು ಚಪ್ಪರಿಸಿ ಮಲಗಿಸಿಬಿಟ್ಟಿರುವವು. ಗಾಳಿ ಕೂಡ ಸುಳಿಯಲರಿಯದೆ ತಟ್ಟನೆ ನಿಂತುಬಿಟ್ಟಂತೆ ತೋರುವದು. ಎಲ್ಲಿಯೊ ಒಂದು ನಾಯಿಯ ಬೊಗಳು, ಇನ್ನೆಲ್ಲಿಯೊ ಒಂದು ಹಾಲಕ್ಕಿಯ ಕಿಲಬಿಲ ಕೇಳುತಿರುವುದು. ತೆರೆ ಇಲ್ಲದ ಸ್ತಬ್ಧ ಸರೋವರದಲ್ಲಿ ಚಲ್ಲಿದ ಒಂದು ಸಣ್ಣ ಹರಳಿನಂತೆ ಅವು ಈ ಶಾಂತಿಯ ಗಭೀರತೆಯನೆ ಹೆಚ್ಚಿಸುತಿರುವವು. ಆದರೇನು, ಪ್ರಾಣನಾಥಾ, ಈ ಎನ್ನ ಹೃದಯಾಂಗಣದಲ್ಲಿ ಇದೆಂತಹ ಅಲ್ಲೋಲ ಕಲ್ಲೋಲ! ಈ ಹೊರಗಣ ಶಾಂತಿಯು, ಮೈಗೆ ತೊಡೆದಂತಿರುವ ಈ ಇರುಳಿನ ಶಾಂತಿಯು ಎನ್ನೊಳಗೆ ಹೊಗಲರಿಯದೆ? ಶಾಂತಿದೇವಿ ಎನ್ನ ಮನದ ಹೊಸತಿಲೊಳಗೆ ಕಾಲಿಡಲಾರಳೆ? ಎನ್ನ ಈ ಚಿಕ್ಕ ಮನೋ-ಮಂದಿರದಲ್ಲಿ ಇದಾವ ಪರಿಯ ಕುದಿ, ಇದಾವ ತೆರದ ತರಳತೆ, ಇದಾವ ಬಗೆಯ ತಳಮಳ! ಇದೇನು ನಿನ್ನ ವಿರಹವಿಹ್ವಲತೆಯೊ ಅತೃಪ್ತ ಆಕಾಂಕ್ಷೆಗಳ ಅಸ್ವಸ್ಥತೆಯೊ ಪ್ರಸುಪ್ತ ಸಂಕಲ್ಪಗಳ ಸ್ವಪ್ನಭಾವವೊ ಸಾಯಲಾರದ ವಾಸನಾಜಾಲದ ತಾಂಡವವೊ, ಏನೆಂದು ತಿಳಿಯಲಿ, ದೇವಾ? ಇದನಾರು ಶಾಂತಗೊಳಿಸಬಲ್ಲರು ನೀನಲ್ಲದೆ, ಪ್ರಭುವೆ? ಇನ್ನಾರು ಬಲ್ಲರು, ನೀನಲ್ಲದೆ, ಈ

ಹೃದಯದ ಗೂಢ ಪ್ರಶ್ನೆಗಳನು, ಅದರ ಅಸ್ಥಿರತೆಯ ಬೀಜವನು, ಆದಕಾದ ಅಸಾಧ್ಯ ರೋಗದ ಔಷಧವನು ? ಅಂತರಾತ್ಮಾ, ಇನ್ನು ನೀನೇ ಗತಿ. ಹೃದಯದೊಡೆಯಾ, ನೀ ಕೈಬಿಟ್ಟರೆ ನಾ ಮತ್ತಿನ್ನಾರನಾಶ್ರಯಿಸಲಿ ?

೪೯

ಆಧಿ-ವ್ಯಾಧಿಗಳು, ಸಂಕಟ-ಸಂತಾಪಗಳು, ದುಃಖ-ಕಷ್ಟಗಳು ಎನಗೆ ಬೇಡವೆಂದು ನಾನು ನಿನ್ನನೆಂದೂ ಪ್ರಾರ್ಥಿಸಲಾರೆ, ದೇವಾ. ಇವು ಇಲ್ಲದ ನಿಃಸಾರ ಜೀವನವ ನಾನೊಲ್ಲೆನೊಲ್ಲೆನು, ಪ್ರಭುವೇ. ಆದರೆ ನಾನು ಬೇಡುವುದೊಂದೆ, ನೀನು ಇವುಗಳಲಿ ಇರು, ಎಂಬುದನು. ಬರಲಿ, ಇವುಗಳೆಲ್ಲ ಬರಲಿ. ನನ್ನ ಮೇಲೆ ಅಡ್ಡಮಳೆಯಂತೆ ಕರೆಯಲಿ, ನನ್ನನು ಜೇನಿನಂತೆ ಮುತ್ತಲಿ. ನೀ ಮಾತ್ರ ಎನಗೆ ನಿನ್ನ ಮುಖವ ಸಂತತ ತೋರುತಿರು, ಜೀವದೊಡೆಯಾ. ಅಂದರೆ ಅದನೆಲ್ಲವನು ನಸುನಗುತ ಸಹಿಸುವೆ, ಸ್ಮಿತಹಾಸ್ಯಮಾಡುತ ದಾರಿಯ ನಡೆವೆ, ಸಂಸಾರಭಾರವನು ಸಮಭಾವದಿ ತೂಗಿ ಒಗೆಯುವೆ. ತಾಯಿ ಕೊಡುವ ಗುಟ್ಟಿಯಂತೆ, ವೈದ್ಯ ಕೊಡುವ ಕಹಿ ಕಷಾಯದಂತೆ ಇದನೆಲ್ಲ ಸೇವಿಸಿ, ಅರಗಿಸಿ ಅಮೃತನಾಗುವೆ ನಾನು, ದೇವದೇವಾ. ರೋಗದ ಘಸಸೋಪಿಸಲಿ, ದುಷ್ಟರೆಸಗುವ ಪೀಡೆಯಲಿ, ಸೆರೆಮನೆಗಳ ಸಂತಾಪದಲಿ, ಘೋರ ರಣರಂಗದ ಗಾಯಗಳಲಿ, ನಿಸರ್ಗದ ಆಘಾತ

ಅಪಘಾತಗಳಲಿ, ವಿರಹ ವ್ಯಥೆಗಳಲಿ ನಿನ್ನ ದಿವ್ಯ ಸ್ಪರ್ಶವಾಗು ತಿರಲಿ ಎನಗೆ ದೇವಾ. ನಿನ್ನ ಕಲ್ಯಾಣತಮರೂಪವ ಕಾಣುವ ಕಣ್ಣ ನೆಲ್ಲೆಲ್ಲಿಯೂ ಕೊಟ್ಟು ಧನ್ಯಗೊಳಿಸು ಎನ್ನನು, ಅಂತರಾತ್ಮಾ.

೫೦

ಇದೆಂತಹ ಮಣಿಹವ ನೇಮಿಸಿದೆ ದೇವಾ ? ಮನವನಾಳುವುದು ನನ್ನಳವೆ ? ಯಾರೂ ಇಲ್ಲ, ಈಗ ಬದಿಗೆ ಯಾರೂ ಇಲ್ಲ, ಎನ್ನ ಸಹಾಯಕೆ ಯಾರೂ ಇಲ್ಲ. ನಾನೇ ನಾನು ಎನ್ನ ವಿಚಾರ ಗಳೆ ವಿಚಾರಗಳು, ಎನ್ನ ಭಾವನೆಗಳೆ ಭಾವನೆಗಳು. ಈ ಎನ್ನ ಚಿಕ್ಕ ಹೃದಯಪಾತ್ರದಲಿ ಇದೆಂತಹ ಪ್ರಚಂಡ ಭಾವಸಮುದ್ರವು, ಇದೆಂತಹ ವಿಶಾಲ ವಿಚಾರಸಾಗರವು ! ಸ್ವಾಮಿ. ಇವುಗಳಲಿ ಒಂದು ಒಂಟಿಹುಟ್ಟಿನ ಹರಗೋಲಿನಂತೆ ಎನ್ನ ಪಾಡು. ಭಾವನೆ ಗಳ ಈ ಬಿರುಗಾಳಿ, ಬಗೆಗಳ ಈ ಉಕ್ಕು, ಅಂತರದಲ್ಲಿಯ ಈ ಏರಿಳಿತ ಇವುಗಳಲಿ ಅಲೆಯಲೆದಾಡಿ, ನೋಡಿ, ನೊಂದು ಬೆಂದು, ಬೇಸತ್ತೆನಯ್ಯಾ. ಇವುಗಳನು ಆಳಿ ಉಳಿಯುವ ಆಶೆ ಇನ್ನೆಲ್ಲಿಯ-ದಯ್ಯಾ. ಹೀಗೆ ಎತ್ತ ಒಗೆದತ್ತ ಹೋಗಿ ಮಿಡುಮಿಡುಕಿ ಮಡಿ ಯುವಂತಾಯಿತು ಎನ್ನ ಜೀವನವು, ದೇವಾ. ಎನ್ನ ಎಳೆ ಕನಸು ಗಳೆಲ್ಲ ಮನಸಿನಲ್ಲಿಯೆ ಮಣ್ಣಾದುವು, ಎನ್ನ ಇಚ್ಛೆಗಳೆಲ್ಲ ಇದ್ದ-ಲ್ಲಿಯೆ ಇಂಗಿದವು. ಇನ್ನಾರಿಗೆ ಮೊರೆ ಇಡಲಿ, ಅಂತರಾತ್ಮಾ? ನೀನೆ ಎನ್ನ ಧ್ರುವಚಿಕ್ಕೆಯಲ್ಲವೆ ? ಈ ಕಗ್ಗತ್ತಲೆಯಲಿ ನೀನೆ

ಎನ್ನ ಕೈದೀಪ, ಎನ್ನ ಆಶೆಯ ಕಿರಣ, ಎನ್ನ ಮರುಜೀವಣಿ. ದೇವಾ, ದೇವಾ, ಕೈಹಿಡಿದು ಕಾಯಯ್ಯಾ, ಹೃದಯದ ಈ ಹಗೆತನವನು ಹೋಗಲಾಡಿಸಯ್ಯಾ, ಈ ಹುಮ್ಮಸದ ಕುದುರೆಯನು ಏರುವ ಹದನವನು ಕಲಿಸಯ್ಯಾ, ಎನ್ನ ಹುಚ್ಚು ಮನವನಾಳಿ ಬಾಳುವ ಆನಂದವನು ಕರುಣಿಸಯ್ಯಾ, ಅಂತರಾತ್ಮಾ.

೫೧

ಆಹಾ! ಎಂತಹ ಫಲವತ್ತಾದ ಭೂಮಿ ಇದು! ಕಾಳು ಕಡಿ, ಹಣ್ಣು ಹಂಪಲು, ಹೂ ಬಳ್ಳಿ ಇವುಗಳನು ಬೆಳೆಯಿಸಿ, ಕೊಟ್ಟು, ಮಾನವಜೀವನವನು ಪ್ರಾಣಪರಾಕ್ರಮಗಳಿಂದ ಸಫಲಗೊಳಿಸುವುದು ಈ ಭೂಮಿ! ಗಾಳಿ ತಂಗಾಳಿ, ಈ ಬೆಳಕು ತೇಜದಾಯಕ ಬೆಳಕು, ಈ ವಿಶಾಲ ದೇಶಕಾಲಗಳು ಮಾನವನ ಆಟ ಆಹ್ಲಾದ, ನೋಟಕೂಟಗಳಿಗೆಡೆಗೊಟ್ಟು ಅವನನು ರಮಿಸುವವು. ಭೂಗರ್ಭ ತಾನು ಖನಿಜಗಳನಿತ್ತು ಮಾನವನ ಹಿತವ ಸಾಧಿಸಬೇಕೆನ್ನುವುದು. ಆದರೇನು? ಹೇ ಮಾನವಾ, ಹೇ ಮೂಢ ಮಾನವಾ, ಹೇ ಮೂರ್ಖ ಮಾನವಾ ನಿನ್ನ ಗತಿ ಏನಾಗಿದೆ? ಭೂಮಿಯ ಮೇಲಿನ, ಕೆಳಗಿನ, ಒಳಗಿನ ಈ ಧನ, ಈ ಸಮೃದ್ಧಿ ಇವೆಲ್ಲ ನಿನ್ನ ಕುಲದ ದುಃಖಕೆ ಮಾತ್ರ ಕಾರಣವಾಗಿಲ್ಲವೆ? ಏನಿದು ನಿನ್ನ ಸಮಾಜ, ಏನು ಅದರ ಈ ರಚನೆ? ಎಷ್ಟು ಅನ್ಯಾಯ, ಎಂತಹ ಅಸಮಾನತೆ, ಯಾವ ಮತ್ಸರ,

ಎಂತಹ ದಬ್ಬಾಳಿಕೆ ನಿನ್ನ ಸಮಾಜದಲಿ? ನನ್ನದು, ನನ್ನದು ಎಂದು ಪ್ರತಿಯೊಬ್ಬನು ಬಡಕೊಂಡು, ಎಲ್ಲವನು ಬಳಕೊಂಡು ಬಲಿಯಬೇಕೆನ್ನುವನು! ಏನಿದು ಬಲಿಯುವ ಹವ್ಯಾಸ, ಎಂತಹ ಆಸುರೀ ಆಶೆ ಇದು? ಇದರಿಂದಿನ್ನೆಂದು ಬಿಡಿಸುವಿ ದೇವ ದೇವಾ, ಅಂತರಾತ್ಮಾ, ಈ ಮರುಳ ಮಾನವರನು? ಇನ್ನೆಂದು ನಿಜ ಬಂಧುಭಾವವನು ನೆಲೆಗೊಳಿಸುವಿ ಅವರಲಿ?

## ೫೨

ಎಲ್ಲವೂ ಇದ್ದು ಬುದ್ಧಿಯೊಂದಿಲ್ಲದೆ ಹಾಳಾಯ್ತು ಈ ಮಾನವ ವಂಶ! ಇಷ್ಟೊಂದು ತಿಳಿಯಬಾರದೆ? ಈ ಭೂಮಿ ಎಲ್ಲರದು, ಈ ಗಾಳಿ ಎಲ್ಲರದು, ಈ ಮುಗಿಲು ಎಲ್ಲರದು, ಈ ಬೆಳಕು ಎಲ್ಲರದು ಎಂಬ ಭಾವ ಮೂಡಬಾರದೆ ಎಲ್ಲರಲಿ? ಇದು ನನ್ನದು, ಅದು ನನ್ನದು ಎಂದು ಎಲ್ಲ ದಡ್ಡರು ಜಾಣರು ಕೂಡಿ ಹೊಡೆದಾಡಬೇಕೆ? ಜಾಣರ ಈ ಹೊಡೆದಾಟವ ನೋಡಿ ಹುಚ್ಚರು ಸಹ ನಗುವರು! ದೇವ ಕೊಟ್ಟ ಸುಖಸಾಧನಗಳು ಸರಿಯಾಗಿ ಹಂಚದೆ ಹೊಡೆದಾಡಿ ಸಾಯುವರಲ್ಲಾ ಈ ಮಾನ-ವರು, ಎಂಬುದು ಮೂಲೋಕದಲಿ ನಗೆಗೀಡಾಗುತಿದೆ! ಇನ್ನಾದರು ಬುದ್ಧಿ ಬಾರದೆ, ಇನ್ನಾದರು ಬೆಳಕು ಹೊಳೆಯದೆ? ಇನ್ನಾದರು ನೀನು ಇವರನು ಈ ಪಂಕದೊಳಗಿಂದೆತ್ತಬಾರದೆ ಅಂತ-ರಾತ್ಮಾ? ಇನ್ನೆಷ್ಟು ಪರೀಕ್ಷಿಸುವಿ, ಈ ಬಾಲಬುದ್ಧಿಯವರನು?

೫೩

ಎಂದೋ ಈ ಕತ್ತಲೆ ಹರಿದು ಬೆಳಗಾಗುವದು ? ಎಂದೋ ಈ ಸ್ವಾರ್ಥ ಹೋಗಿ ಪರಾರ್ಥ ನೆಲೆಗೊಳ್ಳುವದು ! ಎಂದೋ ಈ ಮೂಢತನ ಹೋಗಿ ಜಾಣತನ ಬರುವದು ಈ ಮನುಜ ವಂಶದಲಿ ! ಎಂದೋ ನೀತಿ, ಸತ್ಯ, ಬಾಂಧವ್ಯಗಳ ತವರೂರಾಗುವದು ಈ ಹುಚ್ಚು ಸಮಾಜ ! ಈ ಭೂಮಿಸೀಮೆ, ಈ ಧನಕನಕ, ಈ ಕಣ್ಣಿಗೆ ಕಾಣುವ ಸಿರಿಸಂಪತ್ತು ಇದೆಲ್ಲ ಸಮಾಜದ್ದು ; ತನ್ನ ಶಾರೀರಿಕ, ಮಾನಸಿಕ, ನೈತಿಕ ಶಕ್ತಿಸಾಮರ್ಥ್ಯಗಳನ್ನೆಲ್ಲ ವಿಕಾಸಗೊಳಿಸಿ, ಬಲಿಸಿ ತಾನು ಈ ಸಮಾಜದೇವತೆಗೆ ಅರ್ಪಿಸಬೇಕು ಎಂಬ ವೃತ್ತಿ ಪ್ರತಿ ಮಾನವನ ಮನೋಮಂಡಲದಲಿ ಮೂಡಿ ಮನೆಮಾಡುವನಕ ಅಸಾಧ್ಯ, ಸಮಾಜ ಸುಸಂಘಟನೆ ಅಸಾಧ್ಯ, ದೇವಾ. ಹೀಗೆಂದು ಮಾಡಬೇಕೆನ್ನುವಿ ? ಹೀಗೆಂದು ಮಾಡಿ ಮಾನವಕುಲವನು ಸಲಹಬೇಕೆನ್ನುವಿ, ಅಂತರಾತ್ಮಾ ?

೫೪

ನಾ ನಿನ್ನ ನಲ್ಮೆಯ ಹಸುಗೂಸಲ್ಲವೆ ದೇವಾ, ನಿನ್ನ ಪ್ರಿಯ ಪುತ್ರನಲ್ಲವೆ ದೊರೆಯೆ ? ನಾ ಹುಟ್ಟಿ ಬೆಳೆದಿರುವೆ ನಿನ್ನ ನಿಸರ್ಗದೇವತೆಯ ಮಡಿಲಲ್ಲಿ ; ಆಡಿರುವೆ ಆಕೆಯ ತೋಳ ತೊಟ್ಟಿಲಲ್ಲಿ. ವನದ ವೃಕ್ಷ ಬೆಳಕನರಸಿ ಅದರತ್ತ ತನ್ನ ಚಿಗುರನು

ಚಾಚುವಂತೆ, ಹೂಗಳ ಮಧುವಿಸತ್ತ ಜೇನು ಝೇಂಕರಿಸಿ ಸಾಗು ವಂತೆ, ನನ್ನ ಇಂದ್ರಿಯ ಮನಗಳೆಲ್ಲವು ಎಳಸುವವು ನೀ ಸೃಜಿ-ಸಿದ ರಮಣೀಯ ವಸ್ತುಗಳೆಡೆಗೆ, ಹೇ ವಿಶ್ವರೂಪಾ. ಆದರೇನು, ಅಕೊ ಬಂದರೀ ಶುಷ್ಕ ನಿಗ್ರಹಿಗಳು—ಇದು ಘಾತಕವು ಅದು ಘಾತಕವು, ಸವಿಯನು ಉಣ್ಣಬೇಡಿ, ಸುಂದರವಾದುದನು ಸಂದರ್ಶಿಸಬೇಡಿ, ಇಂಪಾದುದನು ಕೇಳಬೇಡಿ, ಮೃದುವಾದುದನು ಸೋಂಕಬೇಡಿ, ಮಧುರವನು ಸೇವಿಸಬೇಡಿ ಎಂದು ಉಸುರು-ತಿರುವರವರು. ಎನ್ನ ಮನವು ಅವುಗಳಲಿ ಸಿಲುಕಿ ಬಿದ್ದು ನಿನ್ನತ್ತ ಸಾಗಲಿಕ್ಕಿಲ್ಲೆಂಬ ಭಯ ಅವರಿಗೆ! ವೃಕ್ಷದಡಿಗೆ ಇದ್ದು, ಭಿಕ್ಷೆಯ ಬೇಡಿ, ರುಕ್ಷವನು ತಿಂದು, ಶಿಕ್ಷೆಯ ಭೋಗಿಸುತಿರುವುದೆ ನಿನ್ನ ಹಾದಿ ಎನ್ನುತಿರುವರವರು. ದೇವಾ, ದೇವಾ, ಇದೆಯೊ ನಿನ್ನ ಬಳಿಗೆ ಬರುವ ಮಾರ್ಗ? ಇದಕಾಗಿ, ಈ ಪರಿ ಕಾಲ್ಕೆಳಗೆ ಮೆಟ್ಟು ವುದಕಾಗಿ ಹುಟ್ಟಿಸಿದೆಯಾ ಎನ್ನ ಇಂದ್ರಿಯಗಳನು? ಇದಕಾಗಿ ಹೀಗೆ ಪೂರ್ಣತ್ಯಜಿಸುವದಕಾಗಿ ಈ ವಿವಿಧ ವಿಶ್ವವ ನಿರ್ಮಿಸಿರು ವಿಯಾ? ಇದು ನೀ ಜೀವಕ್ಕೆ ಒಡ್ಡಿದ ಬಲೆ ಎಂದು ನಂಬಲೆ ನಾನು? ಅಂತರಾತ್ಮಾ, ಈ ಒಗಟನ್ನು ನೀನಲ್ಲದೆ ಇನ್ನಾರು ಬಿಡಿಸಬಲ್ಲರು?

## ೫೫

ದೇವಾ, ನಿನ್ನನು ಹುಡುಕಿ ಹುಡುಕಿ ಬೇಸತ್ತೆ, ನಿನ್ನ ದಾರೀ ಕಾದು ಕಾದು ಸೋತೆ. ರಾಮ ರಾಮನೆಂದು ಜಪಿಸಲು ರಾಮಾಯಣದ ಮಾನವೀ ರಾಮನೆದುರಾದನೆ ಹೊರತು ಸರ್ವ-

ಕರ್ತ ಸರ್ವಭರ್ತ ಸರ್ವವ್ಯಾಪಿ ನೀನು ಎನಗೆ ಕಾಣಲಿಲ್ಲ. ಕೃಷ್ಣ ಕೃಷ್ಣನೆಂದು ಧ್ಯಾನಿಸಲು ಗೋಪೀವಲ್ಲಭ ಚಕ್ರಧರ ಪಾರ್ಥ-ಸಾರಥಿಯು ಮುಂದೆ ಬಂದು ನಿಂತನೆ ಹೊರತು ಪ್ರತ್ಯಕ್ಷ ವಿಶ್ವಂಭರನು ತೋರಲಿಲ್ಲ. ಶಿವ ಶಿವನೆಂದರೆ ಸ್ಮಶಾನವಾಸಿ ರುಂಡ ಮಾಲಾಧರ ರುದ್ರನು ಗೋಚರನಾದನೆ ಹೊರತು ವಿಶ್ವಲೀಲಾ-ವಿಹಾರಿಶಕ್ತಿಯು ಕಣ್ಣಿಗೆ ಬೀಳಲಿಲ್ಲ. ನಿನ್ನನು ಕಂಡೆವು, ನೋಡಿದೆವು, ಮಾತನಾಡಿದೆವು, ಒಡನಾಡಿದೆವು, ಎಂದು ಹೇಳುವದು ಎಷ್ಟೋ ಜನ! ನಿಜವೆ ಇದು, ಗುಣಾತೀತ ಪ್ರಭುವೇ? ಅಥವಾ ತಮ್ಮ ಶುದ್ಧೀಕೃತ, ಇಲ್ಲವೆ ಧ್ಯೇಯೀಭೂತ, ಇಲ್ಲವೆ ಕಲ್ಪಿತ ಸ್ವ-ಆತ್ಮನನೆ ನೋಡಿ ತಾವು ಧನ್ಯರೆಂದು ಭಾವಿಸಿದರೊ, ದೇವಾ? ಯಾವ ಮೋಹದ ಮುಸುಕನ್ನು ಹಾಕಿ ಅವರನ್ನು ಮೋಸಗೊಳಿಸಿದೆ ಹೇಳಬಾರದೆ, ಅಂತರಾತ್ಮಾ?

೫೬

ದೇವಾ, ದೇವಾ, ನೀನೆಲ್ಲಿರುವಿ? ನಿನ್ನ ದರ್ಶನವೆಂದಾಗುವು ದೆನಗೆ? ನಾನು ಬಲ್ಲೆನು ಬಲ್ಲೆನು ಆ ರಾಮಕೃಷ್ಣರನು, ಆ ವಿಷ್ಣು ಶಿವರನು. ಅವರೆಲ್ಲ ನಮ್ಮ ಕಲ್ಪನೆಯ ಗೊಂಬೆಗಳು. ಎಂತಹ ಹುಚ್ಚರು ನಾವು! ನಿನಗೆ ಕೈಕಾಲು ಪಂಚೇಂದ್ರಿಯ ಗಳನು ಕೊಟ್ಟು, ನಿನ್ನಲ್ಲಿ ನಮ್ಮ ಗುಣಗಳನಾರೋಪಿಸಿ ನಾವು ನಿನ್ನನು ಮಾನವನನು ಮಾಡಿಬಿಟ್ಟಿರುವೆವು! ಪುರಾಣರಾಶಿ

ಗಳನೆ ಬರೆದು, ನಿನ್ನನು ಅವುಗಳ ನಾಯಕನನು ಮಾಡಿ ಮೆರೆಯಿಸಿರುವೆವು! ನಾಲ್ಕು ಕೈ ಚಕ್ರಾದಿಗಳನು ಕಲ್ಪಿಸಿ, ಚಂದ್ರ ನದಿ ಮುಂತಾದವುಗಳನು ತಲೆಯಲಿರಿಸಿ, ಹಾವಿನ ಹಾಸಿಗೆಯ ಮೇಲೆ ಮಲಗಿಸಿ, ಅತ್ತೂ ಇಲ್ಲದ ಇತ್ತೂ ಸಲ್ಲದ ವಿಚಿತ್ರ ಪ್ರಾಣಿಯನೆ ಮಾಡಿ ಪೂಜಿಸುತಿರುವೆವು! ಸಾಕಿನ್ನು ಈ ಹುಡುಗಾಟಿಕೆ, ಆಕಾರವಿಲ್ಲದವಗೆ ಆಕಾರವ ಕೊಟ್ಟು, ಗುಣಾತೀತನಿಗೆ ಗುಣಗಳನು ಕಲ್ಪಿಸಿ, ವಿವಿಧ ಕಥೆ ಕಾದಂಬರಿ ಗಳನು ಕಟ್ಟಿ, ನಾವು ದೇವನನು ನೋಡಿದೆವು, ನೋಡಿದೆವು ಎಂದು ಜಂಭ ಕೊಚ್ಚುವ ಮರುಳುಗಳು ನಮ್ಮಂತಹರು ನಾವೇ ಅಲ್ಲವೆ? ಇವುಗಳಲ್ಲಿಯೂ ನೀನಿರಬಹುದು, ಆದರೆ ಪ್ರಭುವೇ ಇವೇ ನೀನಲ್ಲ, ಸರ್ವಥಾ ನೀನಲ್ಲವೆಂಬುದನು ನಾ ಬಲ್ಲೆ. ನೀನು ಆಕಾರಾತೀತ, ಗುಣಾತೀತ; ನೀನು ಸತ್ತು, ನೀನು ಚಿತ್ತು, ನೀನು ಆನಂದ, ನೀನು ಆದಿಶಕ್ತಿ. ನಿನ್ನ ಕಟ್ಟುಗಳ ಮುಖದಿಂದ ನಿನ್ನನು ನೋಡಬಲ್ಲೆವಲ್ಲದೆ ನಿನ್ನನು ಪ್ರತ್ಯಕ್ಷ ಕಾಣಲಾರೆವು, ಕಲ್ಪಿಸಲರಿಯೆವು. ನಿತ್ಯ ನಿರ್ಮಲಾನಂದವ ಪಡೆವಂತೆ ನಿನ್ನ ಕಟ್ಟಳೆಗಳನು ಪಾಲಿಸುವುದೆ ಪರಮಧರ್ಮದ ಚರಮಸೀಮೆಯಲ್ಲವೆ ಸ್ವಾಮೀ? ನಿನ್ನ ಕಟ್ಟಳೆಗಳನು ಚನ್ನಾಗಿ ಕಾಣಿಸಿ ಆನಂದದ ದಾರಿಯ ತೋರು, ಅಂತರಾತ್ಮಾ.

ಅದೇಕೆ ದೇವಾ, ನಿನ್ನಲ್ಲಿ ಅಷ್ಟೊಂದು ಕಠೋರತನವೇಕೆ?
ಸ್ವಯಂವರಿಸಲು ಬಂದ ಉಪವರವಧುವನ್ನು ಇಷ್ಟೊಂದು ವಿರಹಪಡಿಸುವದೇಕೆ ನೀನು? ಇದರಲ್ಲಿ ನಿನಗೇನು ಸುಖ? ಈ ಪರಿ ಪೀಡಿಸುವ ನಿನಗೆ ಅದಾರು ಕರುಣಾನಿಧಿ ಎಂದು ಹೆಸರಿಟ್ಟ-ವರು? ಅಹುದಹುದು, ಇದೇ ಇದೇ ಆ ಸಂಕೇತಸ್ಥಾನ. ತಿಲದಷ್ಟು ಸಂಶಯವಿಲ್ಲ. ಅಯ್ಯೋ, ಇಲ್ಲಿಗೆ ಬರಲು ನನಗೆಯೆ ತಡವಾಗಿರಬಹುದೇ? ಇಷ್ಟರಲ್ಲಿ ನೀನು ಬಂದು ಸುಳಿದಾಡಿ ಹೋಗಿರಬಹುದೇ? ಇಕೋ ಈ ಬನದಲ್ಲಿಯ ಮಾಟಾದ ಹೆಜ್ಜೆಗಳು ನಿನ್ನವೆ ಅಲ್ಲವೇ? ಇಕೋ ಈ ಕತ್ತುರಿಯ ಪರಿ-ಮಳವು ನಿನ್ನ ಮೈಗಂಪಲ್ಲವೆ? ಅಯ್ಯೋ, ಇಲ್ಲಿ ತಡೆದು, ಬೇಸತ್ತು, ಸಿಟ್ಟಾಗಿ ವನಮಾಲೆಯನು ಹರಿದೊಗೆದು, ಹೂ-ಗಳನು ಚಲ್ಲಾಪಿಲ್ಲಿ ಮಾಡಿ ಹೋಗಿಬಿಟ್ಟಿರುವಿಯಾ? ಹೇ ಪ್ರಾಣೇಶ್ವರಾ, ನಾನೆಂಥ ಪಾಪಿ, ನಾನೆಂಥ ಚಾಂಡಾಲಿ! ಎನ್ನ ಈ ಸುಟ್ಟ ದೇಹವನು ಸಿಂಗರಿಸುವದರಲ್ಲಿಯೇ ವೇಳೆಯ ಹಾಳು ಮಾಡಿ ಈ ದೆಸೆಗೀಡಾದೆನಲ್ಲ! ಯುಗಕ್ಕೊಮ್ಮೆ ಬರುವ ಕ್ಷಣವನು ಕಳಕೊಂಡೆನಲ್ಲ! ದೇವನನು ಕಳೆದುಕೊಂಡು, ಹಾ ದೈವಾ, ಎಂದು ಬಾಯಿ ಕಿಸಿದು ಕೂಡುವಂತಾಯಿತು ಎನ್ನ ಗತಿ. ಪ್ರಿಯ ದೇವಾ, ಎಂದೋ ಇನ್ನೆಂದೊ ಮತ್ತೆ ಆ ಕ್ಷಣ ಬರುವದು? ಇನ್ನೆಲ್ಲಿ ಹುಡುಕಲಿ ಮತ್ತೆ ನಿನ್ನನು ಅಂತರಾತ್ಮಾ?

೫೮

ಆಹಾ! ಎತ್ತೆತ್ತಲೂ ಆನಂದ, ನಿತ್ಯ ನಿರ್ಮಲಾನಂದದ ಸುಗ್ಗಿ. ಎಲ್ಲೆಲ್ಲಿಯೂ ಸಲುಮೆ ಒಲುಮೆಗಳ ಸಲಿಸಲಿದಾಟ, ಆದರೆ ನನ್ನ ಪಾಲಿಗೇನು? ಸ್ವಚ್ಛ ಸರೋವರದೆಡೆಗೆ ನಿಂತು ನೀರಡಿಸಿ ಬಳಲುತಿರುವ ಪಾಪಿ ನಾನು! ಬೆಳಕಿನ ಬಯಲ ಬಳಿಯಲಿ ಇದ್ದು ಗವಿಯ ಕತ್ತಲೆಯನನುಭೋಗಿಸುತಿರುವ ಮರುಳ ಮಾನವನು ನಾನು! ಅಯ್ಯೋ ಸ್ವಾಮೀ, ಸುತ್ತಲೂ ಇದ್ದು ಕೈಸಾರಲೊಲ್ಲದು; ಬಳಿಯಲಿದ್ದು ಬಳಸಲಿಕ್ಕೆ ಬರಲೊಲ್ಲದು; ಕೈಯ ತುತ್ತು ಬಾಯಲಿ ಬೀಳಲೊಲ್ಲದು, ಇದೇನು? ಮಗ್ಗುಲ ಲಿದ್ದ ಮಡದಿಯನು ಮುದ್ದಾಡದಂತಾಯ್ತೆನ್ನ ಪಾಡು! ಇದೆಂತಹ ವಿರಹವನೊಡ್ಡಿದೆ ಈ ಒಡಲಿಗೆ ದೇವಾ? ಹೀಗೇಕೆ ಒಡೆಯಾ, ಹೀಗೇಕೆ? ಅಯ್ಯೋ ನಾನು ಎಂಬ ಕಾಳಛಾಯೆ ಕಾಡುತಿದೆ ಎನ್ನನು, ಕಾಮವೆಂಬ ಮೋಹ ಮುಸುಕಿದೆ ಎನ್ನನು! ಇವೆರಡನು ಮೆಟ್ಟಿದೊಡೆ ಮಾತ್ರ ಸರಸ ಸಮ್ಮೇಳದ ಸಾಮ್ರಾಜ್ಯವು ಸ್ಥಿರವಾಗಬಲ್ಲದು ಈ ಹೃದಯದಲಿ, ಅನಂತ ಆನಂದಸ್ರೋತದಲಿ ಮುಳುಗುವದು ಈ ಜೀವನ, ಅಮೃತವ ನುಂಡುಂಡು ತಣಿಯಬಲ್ಲದು ಈ ಜೀವ. ಹೀಗಾಗುವ ಆಶೆ ಯಿದೆಯೆ ದೊರೆಯೇ ಎಂದಾದರೂ ಎನಗೆ? ಹೀಗೆ ಒಮ್ಮೆ ಯಾದರೂ ಎನ್ನನು ತಣಿಸುವಿಯಾ, ಅಂತರಾತ್ಮಾ?

ಆದಾವ ದುಷ್ಟ ದಿನವದು, ನೀನು ಎನ್ನನು ನಿನ್ನ ಹೃದಯ ಕಮಲದಿ ದೂಡಿ ತಳ್ಳಿಬಿಟ್ಟುದು? ಅಯ್ಯೊ, ಅಂದಿನಿಂದಿಂದಿನವರೆಗೆ ಭೂಮಂಡಲದಲಿ ಚಂಚಲಯಾತ್ರಿಯಾಗಿ ಬಳಲುತಿರುವೆ. ಸಲ್ಲನಾಲಿಂಗನದಲಿರುವ ಅರಿಸಿಣ ತೊಡೆದ ನವ ವಧುವಿನಂತೆ, ಹೊನ್ನ ಹುಡಿಯನು ಹೂಸಿಕೊಂಡು ನಿನ್ನ ಹೃದಯಗರ್ಭದ ಬಂಡಸುಣ್ಣುತ ನಾನು ಸುಖಕುಸುಮದ ಶಿರೋಭಾಗದಲ್ಲಿದ್ದೆ. ಆಯ್ಯೋ, ಯಾವ ಕೆಟ್ಟ ಕ್ಷಣವದು? ನೀನು ಆ ದಿನ ಅದೇಕೆ ಸಿಟ್ಟಾದೆಯೊ ನಾ ತಿಳಿಯೆ, ಅದಾವ ಅಪರಾಧವ ಆಗ ನಾ ಮಾಡಿದೆನೊ ಅರಿಯೆ. ಮನೆಮಾರು ಕಳಕೊಂಡ ಮರಮರ ಮರುಗುವ ಅನಾಥನಂತೆ ಈಗ ಕೈಮೀರಿ ಹೋದುದರ ಕನಸನು ಕಂಡು ಕನವರಿಸುತ್ತ ಅಲ್ಲಿ ಇಲ್ಲಿ ಸುಖಲೇಶವನರಸುತ ಪಿರಿಪಿರಿ ತಿರುಗುತಿರುವೆ ನಾನು. ಗಾಳಿಗೊಡ್ಡಿದ ತರಗೆಲೆಯಂತೆ, ಸೆಳವಿಗೆ ಸಿಕ್ಕ ಮೀನದಂತೆ, ಕರ್ಮಜಾಲದಲಿ ತೊಡಗಿದ ಬಡಜೀವದಂತೆ ಎತ್ತ ಹೊರಟಿರುವೆನೊ ಎಂದು ಪಾರಾಗುವೆನೊ ನಾ ಕಾಣೆ. ಕರುಣಾಕರಾ, ಕರುವಿಗೆ ತನ್ನ ತಾಯಿಯ ಬಳಿಯನು, ಕೂಸಿಗೆ ಹೆತ್ತವಳ ಮಗ್ಗುಲವನು, ಪ್ರಿಯೆಗೆ ಪ್ರಿಯನ ಸಂಗವನು ಸಾಧಿಸಿ ಕೊಡಲು ಸಮರ್ಥನು ನೀನೇ. ನನ್ನನು ನಿನ್ನತ್ತ ಬರಮಾಡಿಕೊಂಡು ಒಮ್ಮೆ ಉದ್ಧರಿಸ ಬಾರದೆ ಅಂತರಾತ್ಮಾ.

ಆಹಾ! ಇದುವೆ ಆನಂದ, ಇದುವೆ ಆನಂದ, ಇದುವೆ ನಿರಾಲಂಬ ಆತ್ಮಾನಂದ, ನಿತ್ಯಾನಂದ, ಆನಂದವೆ ಆನಂದ. ಕರ್ಮವೃಕ್ಷದ ಮೃದು ಮಧುರ ಫಲವಿದು, ಸಾಧನ ಕುಸುಮದ ಸುಗಂಧಮಯ ಸುಧೆಯಿದು, ಜೀವನದ ನಿಜ ಸಾರಸರ್ವಸ್ವವಿದು, ನರಜನ್ಮವ ಸಾರ್ಥಕಗೊಳಿಸುವ ಅಮೃತಧಾರೆಯಿದು. ನಿಸರ್ಗ ಶಿಶುವನು ಶಾಂತವಾಗಿ ಮಲಗಿಸುವ ನಿಶೆಯಂತೆ, ವನಸ್ಪತಿವರ್ಗ ಕೆಲ್ಲ ಸೋಮವನೆರೆಯುವ ಚಂದಿರನಂತೆ, ಮಾನವಹೃದಯಗತ ಹಂಬಲಗಳನೆಲ್ಲ ದಣಿವಂತೆ ತಣಿಸಿ ನವಜೀವನ ಸಾಮರ್ಥ್ಯ ವನು ಈಯುವದು ಈ ಆನಂದ. ಅಹಾ, ನಡು ಇರುಳಿನ ಶಾಂತಿ ಯಲಿ ಎನ್ನಂತರಂಗದ ಅಂಗಳದಲ್ಲಿ ನಿಂತು ಬೆಳ್ಳಿಯ ಸೋನೆಯ ಕರೆಯುವ ಎನ್ನ ಆನಂದಚಂದ್ರನೇ, ಕಲ್ಪಕಲ್ಪಾಂತಗಳಿಂದ ತಪಿಸುತ ತಡೆದಿದ್ದೆ ನಾ ನಿನ್ನ ದಿವ್ಯ ಶುಭದರ್ಶನಕಾಗಿ. ಈಗ ಫಲಿಸಿತೆನ್ನ ಬೇಕು ಎನ್ನ ಅಲ್ಪ ಸುಕೃತ. ನಾನೆಂತು ಬಣ್ಣಿಸ ಬಲ್ಲೆ ಎನ್ನ ಧನ್ಯಭಾವವನು? ಈ ಸ್ಥಿತಿಯನೆ ಸ್ಥಿರವಾಗಿರಿಸು, ದೇವಾ. ಇದನೆ ಎನ್ನ ಎಚ್ಚರದ ತಳಹದಿಯಾಗಿಸಿ ನಿಲಿಸು. ಇದುವೆ ಎನ್ನ ಜೀವಭಾವಗಳ ಆಧಾರವಾಗಲಿ. ಇದನೆ ಎನ್ನ ಕರ್ಮಪ್ರೇರಕ ಶಕ್ತಿಯ ಮಾಡಿ ಎನ್ನನು ಆಡಿಸು, ನಲಿದಾಡಿಸು ಈ ವಿಶ್ವಲೀಲೆಯಲಿ, ಅಂತರಾತ್ಮಾ.

# ಶಬ್ದಾರ್ಥ

ಅಂತರ್ಮಥನ: ಮನಸಿನಲ್ಲಿಯ ವಿಚಾರಗಳ ತಿಕ್ಕಾಟ
ಅಟ್ಟುಂಬ: ಹೆಚ್ಚು ಉಣ್ಣುವ
ಅಡಸು: ಗಂಟುಬೀಳು
ಅಪರಂಜಿ: ಶುದ್ಧ ಚಿನ್ನ
ಅಭಿಪ್ರಾಣಿ: ಬಡಪ್ರಾಣಿ
ಅರಗಿಸು: ಪಚನ ಮಾಡು
ಅರಸು: ಹುಡುಕು
ಅಲಗು: ಕತ್ತಿ
ಅಹಂನಾದ: 'ಅಹಂ ಅಹಂ' ಎಂಬ ನಾದ, ಅಹಂಕಾರ
ಅಳವಡು: ಕೈಗೆ ಬರು, ನೆಲೆಗೊಳ್ಳು
ಅಳವು: ಸಾಮರ್ಥ್ಯ
ಅಳವೇ: ಶಕ್ಯವೇ, ಬರುವದೇ
ಅಳಲು: ದುಃಖ
ಅಳಿ: ನಾಶಹೊಂದು; ಹೀನ

ಆಗಸ: ಆಕಾಶ
ಆಣತಿ: ಆಜ್ಞೆ
ಆತ್ಮಗುಣ: ಸಾತ್ವಿಕ ಗುಣಗಳ
ಆರ್ತ: ದುಃಖಪೂರ್ಣ, ದುಃಖಿ
ಆಸರ: ಆಶ್ರಯ
ಇಕ್ಕು: ಇಡು, ಹಾಕು
ಉಣ್ಣಗೂಳಿ: ತಿನಸುಬಕ್ಕ
ಎಡರು: ದುಃಖ, ಕಷ್ಟ
ಎದುರಿಗ: ಶತ್ರು
ಎರಚು: ಚೆಲ್ಲು, ಏರಿಸು, ಅರ್ಪಿ
ಎಸಗು: ಮಾಡು
ಎಸೆ: ಒಗೆ
ಒಗೆದು: ಹುಟ್ಟಿಸಿ, ಹೊರಗೆಹಾ
ಒಲುಮೆ: ಪ್ರೀತಿ, ಅನುಗ್ರಹ
ಓಲಗ: ದರಬಾರು
ಕಟ್ಟು: ನಿಯಮ
ಕಣಸು: ದಿವ್ಯದರ್ಶನ

**ಕತ್ತುರಿ :** ಕಸ್ತೂರಿ

**ಕನವರಿಸು :** ಕನಸಿನಲ್ಲಿ ಬಡಬಡಿಸು

**ಕರಣಂಗಳು :** ಇಂದ್ರಿಯಾದಿ ಸಾಧನಗಳು

**ಕವಾಟ :** ಬಾಗಿಲು

**ಕಾತರಗೊಳ್ಳು :** ದುಃಖಪಡು, ಆರ್ತನಾಗು

**ಕಾಯುಲಮ್ಮನೆ :** ಕಾಯಲು ಸಮರ್ಥನೇ ?

**ಕೂಟ :** ಸಂಗ, ಕೂಡುವಿಕೆ

**ಕೆನ್ನೀರು :** ರಕ್ತ

**ಕೈದು :** ಶಸ್ತ್ರ

**ಕೊಳೆ :** ಹೊಲಸು, ಮಲ

**ಗಂಟುಗಳ್ಳ :** ಗಂಟು ಕಳವು ಮಾಡುವವ

**ಗದ್ದುಗೆ :** ಕಟ್ಟೆ, ಪೀಠ

**ಗಾಸಿಯಾಗು :** ದುಃಖಪಡು, ಗಾಸಿಹೊಂದು

**ಚಾಗಿ :** ತ್ಯಾಗಿ

**ಚರೆ :** ಹೇಳು

**ಜಿಪುಣ :** ಜೀನ, ಜಿಬಟ

**ತಂಗೈ :** ತಂಪಾದ ಕೈ

**ತಡೆಯಲಾಪೆನೆ :** ತಡೆಯಲು ಸಮರ್ಥನೆ ?

**ತಣಿಸು :** ಸಮಾಧಾನಪಡಿಸು

**ತರಗೆಲೆ :** ಒಣ ಎಲೆ

**ತವಕ :** ಆತುರತೆ

**ತಳಕು :** ತೊಡಕು

**ತೊಡೆ :** ನಾಶಗೊಳಿಸು

**ತೊತ್ತು :** ಆಳು

**ತೊರೆ :** ಬಿಡು, ಪ್ರವಾಹ

**ತೊಳಗು :** ಮಿಂಚು

**ತೊಳಲು :** ದುಃಖಪಡು

**ದಿಟ, ಸಟೆ :** ಸತ್ಯ ಮತ್ತು ಸುಳ್ಳು

**ದೆಸೆ :** ಸ್ಥಿತಿ

**ನಚ್ಚು :** ವಿಶ್ವಾಸ, ಶ್ರದ್ಧೆ

**ನಲ್ಲ :** ಪ್ರೇಮಪುರುಷ

**ನಲಿದಾಡು :** ಆನಂದಪಡು

**ನಲುಮೆ, ನಲ್ಮೆ :** ಪ್ರೀತಿ

**ನಿನ್ನಾಳವನು :** ನಿನ್ನ ನಿಜ ಶಕ್ತಿಯನು

**ಪೆರ್ದೊರೆ :** ಹಿರೇ ಪ್ರವಾಹ

**ಬಂಡು :** ಮಿಷ್ಟಾನ್ನ

**ಬಳಸು :** ಉಪಯೋಗಿಸು

**ಬಳಿಸಾರು :** ಹತ್ತರ ಬರು

**ಬೀಡಿಗೆ ಎಡೆಮಾಡು :** ಮನೆಯಲ್ಲಿ ಇರಿಸು
**ಬೀಗು :** ಬಾಡಿಹೋಗು, ಹಳಸು
**ಬೆಂಬಳಿಸಿ :** ಬೆನ್ನುಬಿದ್ದು, ಬೆನ್ನುಹತ್ತಿ
**ಬೆಸಸು :** ಹೇಳು, ಆಜ್ಞಾಪಿಸು
**ಬೊಕ್ಕಸ :** ಧನದ ಕೋಶ
**ಮಡಲು :** ತೊಡೆ
**ಮಣಿಹ :** ಕಾರ್ಯ, ಕರ್ತವ್ಯ
**ಮದ್ದು :** ಔಷಧ
**ಮರಗು :** ದುಃಖಪಡು
**ಮರುಜೀವಣಿ :** ಸಂಜೀವನಿ
**ಮರಳು :** ತಿರುಗು
**ಮಾರಿ :** ಘಾತಕ
**ಮಿನುಗು :** ಮಿಂಚು
**ಮೀಯಿಸು :** ಸ್ನಾನ ಮಾಡಿಸು
**ಮುಕ್ತಿದ :** ಮುಕ್ತಿ ಕೊಡುವ
**ಮುಡಿ :** ತಲೆಯಲ್ಲಿ ಹೂ ಇಟ್ಟುಕೊಳ್ಳು
**ಮುಳುವು :** ಕಂಟಕ
**ಮೈವೆತ್ತ :** ರೂಪುಗೊಂಡ
**ಮೊರೆಯಿಡು :** ಪ್ರಾರ್ಥಿಸು ಕೇಳಿಕೊಳ್ಳು
**ರುಜೆ :** ಜಡ್ಡು
**ರೋಷ :** ಸಿಟ್ಟು, ಕೋಪ
**ವಿಟ :** ಸ್ವೈರಪುರುಷ
**ವೇಶಿ :** ವೇಶ್ಯೆ, ಪಣ್ಯಸ್ತ್ರೀ
**ಶ್ರಾಂತ :** ದಣಿದ
**ಸಂಕುಲ :** ಸಮೂಹ
**ಸಂದೋಹ :** ಸಮೂಹ
**ಸರಿತ್ತು :** ನದಿ, ಹೊಳೆ
**ಸೂರೆಗಾರ :** ಲೂಟಿ ಮಾಡು
**ಸುಳಿವು :** ಸಣ್ಣ ಪ್ರವಾಹ
**ಸೊತ್ತು :** ಸಂಪತ್ತು
**ಸೊಮ್ಮು :** ಸಂಪತ್ತು
**ಸೊಲ್ಲು :** ಮಾತು
**ಹರಣಕ್ಕೆ :** ಜೀವಕ್ಕೆ
**ಹಳಸಿಸು :** ಕೆಡಿಸು
**ಹೀಯಾಳಿಸು :** ಧಿಕ್ಕರಿಸು
**ಹುಮ್ಮಸ :** ಹುರುಪು
**ಹುಲುಸು :** ಫಲ ಕೊಡುವ
**ಹೆಣಗು :** ಪ್ರಯತ್ನಪಡು
**ಹೇಯ :** ತಿರಸ್ಕಾರಕ್ಕೆ ಯೊ
**ಹೊಡೆಗೆಡು :** ನಮಸ್ಕಾರಮಾ
**ಹೊಡೆಗೆಡಿಸು :** ಅಪಮಾನಿ ಹಣ್ಣಿಸು
**ಹೊಲ್ಲ :** ಕ್ಷುದ್ರ, ದುಷ್ಟ

## ಅಂತರಾತ್ಮನಿಗೆ

ಈ ಪುಸ್ತಕದಲ್ಲಿ ಏನಿದೆ......

ಇದೊಂದು ಚಿಕ್ಕ ಗದ್ಯ ಕಾವ್ಯ ಎಂದು ಹೇಳಬಹುದು.
ಸ್ವಾನುಭಾವವೆ ಗುರು, ಎಂಬುದನ್ನು
ಶ್ರೀ ದಿವಾಕರರರು ಗಟ್ಟಿಯಾಗಿ ಮನಗಂಡಿರುವರು.
ಆ ಅನುಭವವನ್ನೆ ಅವರು ಈ ಸಣ್ಣ ಪುಸ್ತಕದಲ್ಲಿ
ಒಂದು ವಿಶೇಷ ಹುರಿಕಟ್ಟಾದ ಶೈಲಿಯಲ್ಲಿ
ಬಣ್ಣಿಸಿದ್ದಾರೆ. ಇದು ಅಂತರಂಗದ ಅನುಭವ.
ಅನೇಕರು ಈ ಪುಸ್ತಕವನ್ನು ತಮ್ಮ ನಿತ್ಯ ಪಾಠದ
ಪುಸ್ತಕವನ್ನಾಗಿ ಉಪಯೋಗಿಸುವರು. ಇದು
ಅತ್ಯಂತ ಲೋಕಪ್ರಿಯವಾಗಿದ್ದು
ಈಗಾಗಲೇ ಇದರ ನಾಲ್ಕು ಆವೃತ್ತಿಗಳು ಮುಗಿದಿದ್ದು
ಈಗ ಐದನೆಯ ಆವೃತ್ತಿ ಹೊರಟಿದೆ.